**ಕರ್ನಾಟಕ ಶಾಲಾ ಪರೀಕ್ಷೆ ಮತ್ತು ಮೌಲ್ಯ ನಿರ್ಣಯ ಮಂಡಲಿ**

**ಮಲ್ಲೇಶ್ವರಂ, ಬೆಂಗಳೂರು – 560 003**

**2024–25 ರ ಎಸ್. ಎಸ್. ಎಲ್. ಸಿ. ಮಾದರಿ ಪ್ರಶ್ನೆಪತ್ರಿಕೆ 2.**

**ವಿಷಯ : ಪ್ರಥಮ ಭಾಷೆ ಕನ್ನಡ**

**ಸಮಯ : 3–15 ಗಂಟೆಗಳು** **ಗರಿಷ್ಠ ಅಂಕಗಳು : 100**

**I.** ಕೆಳಗಿನ ಪ್ರಶ್ನೆಗಳಿಗೆ ಅಥವಾ ಅಪೂರ್ಣ ಹೇಳಿಕೆಗಳಿಗೆ ನಾಲ್ಕು ಆಯ್ಕೆಗಳನ್ನು ಕೊಡಲಾಗಿದೆ. ಅವುಗಳಲ್ಲಿ ಹೆಚ್ಚು ಸೂಕ್ತವಾದ ಉತ್ತರವನ್ನು ಆರಿಸಿ, ಕ್ರಮಾಕ್ಷರದೊಂದಿಗೆ ಬರೆಯಿರಿ. **6 * 1 = 6**

1. **'ಪಂಡಿತ' ಪದವು ಈ ವ್ಯಾಕರಣಾಂಶಕ್ಕೆ ಸೇರಿದೆ;**
   (ಎ) ಅನ್ವರ್ಥನಾಮ (ಬಿ) ರೂಢನಾಮ
   (ಸಿ) ಅಂಕಿತನಾಮ (ಡಿ) ಸರ್ವನಾಮ
   **ಉತ್ತರ : (ಎ) ಅನ್ವರ್ಥನಾಮ**
2. **ಸವರ್ಣದೀರ್ಘ ಸಂಧಿಗೆ ಉದಾಹರಣೆಯಿದು;**
   (ಎ) ವಾಗ್ದೇವಿ (ಬಿ) ಮಳೆಗಾಲ
   (ಸಿ) ಸುರಾಸುರ (ಡಿ) ಏಕೈಕ
   **ಉತ್ತರ : (ಸಿ) ಸುರಾಸುರ**
3. **'<u>ಅಂಬೇಡ್ಕರರಿಗೆ</u> ವೇಳೆ ಎಂದರೆ ಜ್ಞಾನಾರ್ಜನೆಯಾಗಿತ್ತು.' – ಈ ವಾಕ್ಯದಲ್ಲಿ ಗೆರೆ ಎಳೆದ ಪದದಲ್ಲಿರುವ ವಿಭಕ್ತಿ;**
   (ಎ) ಪ್ರಥಮಾ (ಬಿ) ಸಪ್ತಮೀ
   (ಸಿ) ತೃತೀಯಾ (ಡಿ) ಚತುರ್ಥೀ
   **ಉತ್ತರ : (ಡಿ) ಚತುರ್ಥೀ**
4. **ಅನೇಕ ಉಪವಾಕ್ಯಗಳು ಒಂದು ಪ್ರಧಾನ ವಾಕ್ಯಕ್ಕೆ ಅಧೀನವಾಗಿದ್ದಾಗ ಉಪವಾಕ್ಯಗಳು ಮುಗಿದಾಗಲೆಲ್ಲ ಬಳಸುವ ಲೇಖನ ಚಿಹ್ನೆ;**
   (ಎ) ಪೂರ್ಣವಿರಾಮ (ಬಿ) ಅರ್ಧವಿರಾಮ
   (ಸಿ) ಪ್ರಶ್ನಾರ್ಥಕ (ಡಿ) ವಾಕ್ಯವೇಷ್ಟನ
   **ಉತ್ತರ : (ಬಿ) ಅರ್ಧವಿರಾಮ**
5. **'ಮಾಡು' ಪದದ ಸಂಭಾವನಾರ್ಥಕ ರೂಪ;**
   (ಎ) ಮಾಡಲಿ (ಬಿ) ಮಾಡಳು
   (ಸಿ) ಮಾಡಿಯಾಳು (ಡಿ) ಮಾಡನು
   **ಉತ್ತರ : (ಸಿ) ಮಾಡಿಯಾಳು**
6. **ಒಂದು ಪೂರ್ಣ ಕ್ರಿಯಾಪದದೊಂದಿಗೆ ಸ್ವತಂತ್ರವಾಗಿರುವ ವಾಕ್ಯ;**
   (ಎ) ಮಿಶ್ರ ವಾಕ್ಯ (ಬಿ) ಸಂಯೋಜಿತ ವಾಕ್ಯ
   (ಸಿ) ಸಂಯುಕ್ತ ವಾಕ್ಯ (ಡಿ) ಸಾಮಾನ್ಯ ವಾಕ್ಯ
   **ಉತ್ತರ : (ಡಿ) ಸಾಮಾನ್ಯ ವಾಕ್ಯ**

**II.** ಕೆಳಗಿನವುಗಳಲ್ಲಿ ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸರಿಹೊಂದುವ ಸಂಬಂಧೀ ಪದವನ್ನು ಬರೆಯಿರಿ. **4 * 1 = 4**

7. ಕಣ್ದೆರೆ : ಕ್ರಿಯಾ ಸಮಾಸ : : ಸಪ್ತಸ್ವರಗಳು : **<u>ದ್ವಿಗು ಸಮಾಸ.</u>**
8. ಸ್ಥಾನ : ತಾಣ : : ಕಾರ್ಯ : **<u>ಕಜ್ಜ.</u>**
9. ಪಟಪಟನೆ : ಅನುಕರಣಾವ್ಯಯ : : ಕೆನೆಮೊಸರು : **<u>ಜೋಡುನುಡಿ.</u>**
10. ಬರೆಯುವ : ಕೃದಂತನಾಮ : : ಬಳೆಗಾರ : **<u>ತದ್ಧಿತಾಂತ ನಾಮ.</u>**

**III.** ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ. **7 * 1 = 7**

11. **ಕನ್ನಡಕ್ಕೆ ಪರ್ಷಿಯನ್ ಶಬ್ದಗಳು ಯಾವಾಗ ಬಂದವು?**
    ಕನ್ನಡಕ್ಕೆ ಪರ್ಷಿಯನ್ ಶಬ್ದಗಳು ಮಹಮ್ಮದೀಯರ ಆಳ್ವಿಕೆಯ ಅವಧಿಯಲ್ಲಿ ಬಂದವು.
12. **ಹುಲಿಗೆ ಪರಮಾನಂದವಾಗಲು ಕಾರಣವೇನು?**
    ಶಾನುಭೋಗರ ದುಂಡುದುಂಡಾದ ಶರೀರವನ್ನು ನೋಡಿ ಹುಲಿಗೆ ಪರಮಾನಂದವಾಯಿತು.
13. **ಬ್ರಿಟಿಷ್ ಸರ್ಕಾರ ವಿಶ್ವೇಶ್ವರಯ್ಯ ಅವರಿಗೆ ಯಾವ ಪದವಿಯನ್ನು ನೀಡಿ ಗೌರವಿಸಿತು?**
    ಬ್ರಿಟಿಷ್ ಸರ್ಕಾರ ವಿಶ್ವೇಶ್ವರಯ್ಯ ಅವರಿಗೆ 'ಸರ' ಪದವಿಯನ್ನು ನೀಡಿ ಗೌರವಿಸಿತು.
14. **ಸೂರ್ಯಮಿತ್ರನು ತನಗೆ ಕಾಶ್ಯಪಿಯೆಂಬ ತಂಗಿಯಿಲ್ಲ ಎಂದು ಏಕೆ ಹೇಳುತ್ತಾನೆ?**
    ಸೂರ್ಯಮಿತ್ರನು ಅಗ್ನಿಭೂತಿ ಮತ್ತು ವಾಯುಭೂತಿಯರು ತಂದಿದ್ದ ಪತ್ರವನ್ನು ಓದಿದ ನಂತರ ಇವರಿಗೆ ಸಲಿಗೆಯನ್ನು ಕೊಟ್ಟರೆ ಮೊದಲಿನಂತೆ ಸೊಕ್ಕಿನಿಂದ ಹಾಳಾಗುವರು ಎಂಬ ಕಾರಣದಿಂದ ಕಾಶ್ಯಪಿಯೆಂಬ ತಂಗಿಯಿಲ್ಲ ಎಂದು ಹೇಳಿದನು.

**15. ಹಕ್ಕಿಯ ಚುಂಚಗಳು ಎಲ್ಲಿಯವರೆಗೂ ಚಾಚಿವೆ?**
ಕಾಲದ ಸಂಕೇತವಾಗಿರುವ ಹಕ್ಕಿಯ ಚುಂಚಗಳು ದಿಗ್ಮಂಡಲಗಳ ಅಂಚಿನ ಆಚೆಯವರೆಗೂ ಚಾಚಿವೆ.

**16. ಛಲವನ್ನೇ ಮೆರೆಯುವುದಾಗಿ ನಿರ್ಧರಿಸಿದವನು ಯಾರು?**
ಛಲವನ್ನೇ ಮೆರೆಯುವುದಾಗಿ ನಿರ್ಧರಿಸಿದವನು ದುರ್ಯೋಧನ.

**17. ಗುರುವಾಣಿ ಯಾರಿಗೆ ಹೊರೆಯೆನಿಸುತ್ತದೆ?**
ಮೂರ್ಖರ ಕಿವಿಗೆ ಗುರುವಾಣಿ ಎಷ್ಟೇ ಪರಿಶುದ್ಧವಾದರೂ ಹೊರೆಯೆನಿಸುತ್ತದೆ.

## IV. ಕೆಳಗಿನ ಪ್ರಶ್ನೆಗಳಿಗೆ ಮೂರು / ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ. 10 * 2 = 20

**18. ಮದಲಿಂಗನ ಕಣಿವೆಯಲ್ಲಿ ಬರುವಾಗ ಶಾನುಭೋಗರ ಮನಸ್ಸಿನಲ್ಲಿ ಬಂದ ಯೋಚನೆಗಳಾವುವು?**
ಶಾನುಭೋಗರು ಇರಸಾಲಿಗಾಗಿ ಚಿಕ್ಕನಾಯಕನ ಹಳ್ಳಿಗೆ ಹೋಗಿ, ಖಜಾನೆಗೆ ಹಣವನ್ನು ಕಟ್ಟಿ, ವಾಪಸ್ಸು ಹಳ್ಳಿಗೆ ಹೊರಡುವ ವೇಳೆಗೆ ಸಂಜೆ ಆರುಗಂಟೆಯಾಗಿತ್ತು. ಅವರು ತಮ್ಮ ಹಳ್ಳಿಯನ್ನು ತಲುಪಬೇಕಾದರೆ ಮದಲಿಂಗನ ಕಣಿವೆಯನ್ನು ದಾಟಿಹೋಗಬೇಕಾಗಿತ್ತು. ಮದಲಿಂಗನ ಕಣಿವೆ ಕಾಡುದಾರಿ, ಆದ್ದರಿಂದ "ಸ್ವಲ್ಪ ದೊಡ್ಡ ಹೆಜ್ಜೆ ಹಾಕಿದರೆ ಊಟದ ಹೊತ್ತಿಗೆ ಊರು ಸೇರಿಕೊಳ್ಳಬಹುದು" ಎಂದು ಯೋಚಿಸಿದರು ಹಾಗೂ ಬೇಗಬೇಗ ತಮ್ಮ ಹಳ್ಳಿಯ ಕಡೆಗೆ ನಡೆದರು. ಆದರೂ ಅವರು ಮದಲಿಂಗನ ಕಣಿವೆಗೆ ಬರುವ ವೇಳೆಗೆ ಆಗಲೇ ರಾತ್ರಿಯಾಗಿತ್ತು. ಹಸಿವಿನ ಜೊತೆಗೆ ಭಯವೂ ಸೇರಿ ಅವರ ಕಾಲು ಮತ್ತಷ್ಟು ಚುರುಕಾಯಿತು.

**19. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಯಾವ ಯಾವ ಕ್ಷೇತ್ರಗಳು ಸ್ವಯಂ ಆಡಳಿತ ಕ್ಷೇತ್ರಗಳಾದವು?**
ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳನ್ನು ರಚಿಸಿ ಆಡಳಿತ ವಿಕೇಂದ್ರೀಕರಣಕ್ಕೆ ಅನುವು ಮಾಡಿಕೊಡಲಾಯಿತು. ನಗರಪಾಲಿಕೆಗಳು ಹಾಗೂ ಗ್ರಾಮ ಪಂಚಾಯಿತಿಗಳು ಕಾರ್ಯನಿರ್ವಹಿಸಲು ಆರಂಭ ಮಾಡಿದವು. ಇವರ ಕಾಲದಲ್ಲಿ 1. ಗ್ರಾಮ ನಿರ್ಮಲೀಕರಣ, 2. ವೈದ್ಯ ಸಹಾಯ, 3. ವಿದ್ಯಾ ಪ್ರಚಾರ, 4. ನೀರಿನ ಸೌಕರ್ಯ, 5. ಪ್ರಯಾಣ ಸೌಲಭ್ಯ ಮುಂತಾದ ಕ್ಷೇತ್ರಗಳು ಸ್ವಯಂ ಆಡಳಿತ ಕ್ಷೇತ್ರಗಳಾದವು.

**20. ವಚನಕಾರರ ದೃಷ್ಟಿಯಲ್ಲಿ ಅರಿವು ಎಂದರೆ ಏನು? ವಿವರಿಸಿ.**
"ಅರಿವು ಎಂದರೆ ಜೀವನದಲ್ಲಿ ನುಡಿದಂತೆ ನಡೆಯುವುದು. ನುಡಿ ಬೇರೆ; ನಡೆ ಬೇರೆ ಆಗಬಾರದು. ವಚನಕಾರರ ದೃಷ್ಟಿಯಲ್ಲಿ ಅರಿವು ಎಂದರೆ ತನ್ನಷ್ಟಕ್ಕೆ ತಾನು ಇರುವ ಕೇವಲ ತಿಳಿವಳಿಕೆ, ಜ್ಞಾನ ಮಾತ್ರ ಅಲ್ಲ. ಅದು ಕ್ರಿಯೆಯ ಅನುಭವದಿಂದ ಒಡಮೂಡುವುದು. ಅದು ಕೇಳಿ ತಿಳಿದಿದ್ದಲ್ಲ. ಕ್ರಿಯೆಯಲ್ಲಿ ಮೂಡಿದ ತಿಳಿವಳಿಕೆ. ಅದು ತರ್ಕವಲ್ಲ; ನಡೆಯಿಂದ ನುಡಿ ಹುಟ್ಟಿದರೆ ಅದು ಅರಿವು" ಎಂದು ವಚನಕಾರರು ಹೇಳುತ್ತಾರೆ.

**21. ಸೂರ್ಯಮಿತ್ರನು ಮಾವನೆಂದು ತಿಳಿದಾಗ ವಾಯುಭೂತಿಯ ಪ್ರತಿಕ್ರಿಯೆ ಹೇಗಿತ್ತು?**
ಸೂರ್ಯಮಿತ್ರನು ಮಾವನೆಂದು ತಿಳಿದಾಗ ವಾಯುಭೂತಿಯು ಮಾವನಾದ ಸೂರ್ಯಮಿತ್ರನು ಮಾಡಿದುದೆಲ್ಲವು ಅಪಕಾರ ಎಂದು ತಿಳಿದು, "ನಮ್ಮ ಮಾವನು ಭಿಕ್ಷೆಯನ್ನು ಬೇಡಿ ತಂದ ಅನ್ನಕ್ಕೆ ಸ್ವಲ್ಪ ಎಣ್ಣೆಯನ್ನಾಗಲಿ, ಅಂಬಲಿಗೆ ಉಪ್ಪನ್ನಾಗಲಿ ಬಡಿಸಲಿಲ್ಲ. ನಮಗೆ ಸ್ನಾನವನ್ನು ಮಾಡಿಸಲಿಲ್ಲ, ಕೆರೆಗೆ ಹೋಗಿ ಸ್ನಾನ ಮಾಡುವಾಗ ತಲೆಗೆ ಹಾಕಿಕೊಳ್ಳಲು ಎಣ್ಣೆಯನ್ನು ಕೊಡಲಿಲ್ಲ. ತಾನು ಮಾತ್ರ ದಿವ್ಯವಾದ ಆಹಾರಗಳನ್ನು ಪ್ರತಿದಿನವು ನೆಂಟರು, ಆಳುಗಳ ಜೊತೆ ಊಟ ಮಾಡುತ್ತಿದ್ದನು. ಹಬ್ಬದ ದಿನವಾದರೂ ನಮಗೆ ಹಬ್ಬದ ಊಟ ಕೊಡಲಿಲ್ಲ, ಇವನು ಪಂಚಮಹಾಪಾತಕನು, ನಮ್ಮನ್ನು ಏಳೆಂಟು ವರ್ಷಗಳವರೆಗೆ ಹಗೆಗಳಂತೆ ದಂಡಿಸಿದನು" ಎಂದು ಮನದಲ್ಲಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದನು.

**22. ಹೊಸಗಾಲದ ಹಸುಮಕ್ಕಳನ್ನು ಹಕ್ಕಿಯು ಹೇಗೆ ಹರಸಿದೆ?**
"ಕಾಲದ ಸಂಕೇತವಾಗಿರುವ ಹಕ್ಕಿಯು ಯುಗಯುಗಗಳ ಆಗುಹೋಗುಗಳನ್ನು ಹಿಂದಕ್ಕೆ ತಳ್ಳುತ್ತ, ಹೊಸ ಮನ್ವಂತರದ ಪರಿವರ್ತನೆಗೆ / ಪ್ರಗತಿಗೆ ಕಾರಣವಾಗಿದೆ. ಕಾಲದ ಸಂಕೇತವಾಗಿರುವ ಹಕ್ಕಿಯು ತನ್ನ ಹಗಲು ರಾತ್ರಿಗಳೆಂಬ ರೆಕ್ಕೆಗಳನ್ನು ಬೀಸುವ ಮೂಲಕ ಭೂಮಂಡಲದ ಜೀವಿಗಳಿಗೆ ಚೈತನ್ಯ ನೀಡಿ, ಹೊಸಗಾಲದ ಹಸುಮಕ್ಕಳನ್ನು ಹರಸಿ, ಉತ್ತಮ ಭವಿಷ್ಯಕ್ಕಾಗಿ ಶುಭ ಹಾರೈಸುತ್ತಿದೆ" ಎಂದು ಕವಿಗಳು ವರ್ಣಿಸುತ್ತಾರೆ.

**23. ಹಲಗಲಿಯ ಬೇಡರು ದಂಗೆ ಏಳಲು ಕಾರಣವೇನು?**
ಕ್ರಿ.ಶ. 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಂತರ ಬ್ರಿಟಿಷ್ ಸರ್ಕಾರದ ಅನುಮತಿ ಇಲ್ಲದೆ ಭಾರತೀಯರು ಶಸ್ತ್ರಾಸ್ತ್ರಗಳನ್ನು ಹೊಂದುವಂತಿಲ್ಲ ಮತ್ತು ತಮ್ಮಲ್ಲಿರುವ ಆಯುಧಗಳನ್ನು ಸರ್ಕಾರಕ್ಕೆ ಒಪ್ಪಿಸಬೇಕು ಎಂಬ ಆದೇಶವನ್ನು ನೀಡಿತು ಈ ಆದೇಶವನ್ನು ವಿರೋಧಿಸಿ ಹಲಗಲಿಯ ಬೇಡರಾದ ಪೂಜೇರಿ ಹನುಮ, ಬ್ಯಾಡರ ಬಾಲ, ಭೀಮ, ಜಡಗರಾಮ ಮೊದಲಾದ ವೀರರು ತಮ್ಮಲ್ಲಿರುವ ಆಯುಧಗಳನ್ನು ಕೊಡಲು ಒಪ್ಪದೆ ದಂಗೆ ಎದ್ದರು. ಏಕೆಂದರೆ ಬೇಡರ ಬದುಕಿಗೆ ಆಯುಧಗಳು ಅಗತ್ಯ; ಆಯುಧಗಳಿಲ್ಲದ ಜೀವನ ಸತ್ತಂತೆ ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಇದು ಹಲಗಲಿಯ ಬೇಡರು ದಂಗೆ ಏಳಲು ಕಾರಣವಾಯಿತು.

**24. 'ವಸಂತ ಮುಖ ತೋರಲಿಲ್ಲ' ಕವನದಲ್ಲಿ ಪ್ರಕೃತಿಯ ಸಂಭ್ರಮ ಹೇಗೆ ವ್ಯಕ್ತವಾಗಿದೆ?**
ಋತುಗಳ ರಾಜನಾದ ವಸಂತನ ಆಗಮನದ ಸಮಯದಲ್ಲಿ ಪುಟ್ಟಿಯ ಒಡೆಯನ ಮನೆಯ ಅಂಗಳದಲ್ಲಿ ಮಾವಿನ ಮರಗಳು ಹಸುರಾದ ಎಲೆಗಳು ಮತ್ತು ಹಣ್ಣುಗಳಿಂದ ಮೈದುಂಬಿ ನಿಂತಿವೆ. ಆಕಾಶದಲ್ಲಿ ಹಕ್ಕಿಗಳು ರೆಕ್ಕೆಗಳನ್ನು ಬಿಚ್ಚಿ ಹಾರುತ್ತಿವೆ. ಮಾವಿನ ಚಿಗುರನ್ನು ತಿಂದು ಕೋಗಿಲೆಗಳು ಮನದುಂಬಿ ಹಾಡುತ್ತಿವೆ. ಕಡಲು ಉಕ್ಕಿ ಹರಿಯುತ್ತಿದೆ. ಇಳೆಯು ವಸಂತನ ಆಗಮನದ ಸಂತಸದಲ್ಲಿ ಮುಳುಗಿ ಸಂಭ್ರಮಿಸುತ್ತಿದೆ. ಮಲ್ಲಿಗೆಯ ಹೂವುಗಳು ಅರಳಿ ಮುಗುಳು ನಗೆ ಬೀರುತ್ತಿವೆ. ಮನೆಯ ಮುಂದಿನ ಹೊಳೆಯುವ ರಂಗೋಲಿಯಲ್ಲಿ ಬಾಲರವಿಯು ಥಳಥಳಿಸುತ್ತಿದ್ದಾನೆ. ಹೀಗೆ 'ವಸಂತ ಮುಖ ತೋರಲಿಲ್ಲ' ಕವನದಲ್ಲಿ ಪ್ರಕೃತಿಯ ಸಂಭ್ರಮ ವ್ಯಕ್ತವಾಗಿದೆ.

**25. ಬಾಲಕ ಭಗತ್‌ಸಿಂಗ್‌ನ ತಾಯಿಯ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯಲು ಕಾರಣವೇನು?**

ಎಲ್ಲ ಮಕ್ಕಳೂ ಸಂಜೆ ಶಾಲೆಯಿಂದ ಮನೆಗೆ ಬಂದಿದ್ದರು. ಹನ್ನೆರಡು ವರ್ಷದ ಬಾಲಕ ಭಗತ್‌ಸಿಂಗ್ ಮಾತ್ರ ಮನೆಗೆ ಬಂದಿರಲಿಲ್ಲ. ಅವನ ತಂದೆ ತಾಯಿಯರಿಗೆ, ಕುಟುಂಬದ ಇತರ ಸದಸ್ಯರಿಗೆ ಬಹಳ ಆತಂಕವಾಯಿತು. ಸಂಜೆ ತಡವಾಗಿ ಬಾಲಕ ಭಗತ್‌ಸಿಂಗ್ ಮನೆಯೊಳಗೆ ಕಾಲಿಟ್ಟನು. ಅವನ ತಂಗಿ "ವೀರಾಜಿ ಬಂದ; ವೀರಾಜಿ ಬಂದ" ಎಂದು ಕೂಗಿಕೊಂಡಳು. ಅವನ ತಾಯಿ ಬಾಲಕ ಭಗತ್‌ಸಿಂಗನನ್ನು ಬಿಗಿಯಾಗಿ ಅಪ್ಪಿದಳು. ಬಾಲಕ ಭಗತ್‌ಸಿಂಗ್‌ನು ಶಾಲೆಯಿಂದ ತಡವಾಗಿ ಮನೆಗೆ ಬಂದ ಕಾರಣದಿಂದ ಅವನ ತಾಯಿಯ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯಿತು.

**26. ಜ್ಞಾನಿ–ಅಜ್ಞಾನಿಗಳ ಸಂಗದ ಬಗೆಗಿನ ಅಕ್ಕಮಹಾದೇವಿಯ ಅಭಿಪ್ರಾಯವನ್ನು ವಿವರಿಸಿ.**

"ಜ್ಞಾನಿಗಳೊಡನೆ ಮಾಡಿದ ಸಂಗ ಮೊಸರನ್ನು ಕಡೆದು ಬೆಣ್ಣೆಯನ್ನು ಪಡೆದಂತೆ ಪ್ರಯೋಜನಕಾರಿಯಾಗಿರುತ್ತದೆ. ಅಜ್ಞಾನಿಗಳೊಡನೆ ಮಾಡಿದ ಸಂಗ ಕಲ್ಲುಗಳನ್ನು ಉಜ್ಜಿ ಬೆಂಕಿಯನ್ನು ಪಡೆದಂತೆ ಅಪ್ರಯೋಜನಕಾರಿಯಾಗಿರುತ್ತದೆ" ಎನ್ನುವುದು ಜ್ಞಾನಿ–ಅಜ್ಞಾನಿಗಳ ಸಂಗದ ಬಗೆಗಿನ ಅಕ್ಕಮಹಾದೇವಿಯವರ ಅಭಿಪ್ರಾಯವಾಗಿದೆ.

**27. ಪೈಗಳ ತಮ್ಮನ ನೂಲು ಮದುವೆಗೆ ಸಿದ್ಧತೆ ಹೇಗೆ ನಡೆಯುತ್ತಿತ್ತು?**

ಗೋವಿಂದಪೈಗಳ ಮನೆಯಲ್ಲಿ ಜಯಸಂವತ್ಸರದ ಮಾಘ ಮಾಸದ ಕೊನೆಯ ವಾರದಲ್ಲಿ ಅವರ ತಮ್ಮನ ನೂಲುಮದುವೆಯ (ಉಪನಯನ/ಮುಂಜಿ) ಕಾರ್ಯಕ್ರಮವಿತ್ತು. ಅದಕ್ಕಾಗಿ ಅವರ ಮನೆಯ ಅಂಗಳದಲ್ಲಿ ಚಪ್ಪರ ಹಾಕುತ್ತಿದ್ದರು. ಆ ಚಪ್ಪರದ ಒಂದು ಕಡೆಯಲ್ಲಿ ಲಡ್ಡುಗೆಗಳನ್ನು ಕಟ್ಟುತ್ತಿದ್ದರು. ಮತ್ತೊಂದು ಕಡೆ ಮಂಡಿಗೆಗಳನ್ನು ಮಡುಚುತ್ತಿದ್ದರು. ಬೇರೊಂದು ಕಡೆ ಸೇವಿಗೆಯನ್ನು ಒತ್ತುತ್ತಿದ್ದರು. ಹೀಗೆ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು.

## V. ಕೆಳಗಿನ ಕವಿ / ಸಾಹಿತಿಗಳ ಜನ್ಮಸ್ಥಳ, ಕಾಲ, ಕೃತಿ ಮತ್ತು ಬಿರುದು / ಪ್ರಶಸ್ತಿಗಳನ್ನು ಕುರಿತು ವಾಕ್ಯರೂಪದಲ್ಲಿ ಬರೆಯಿರಿ. 2 * 3 = 6

**28. ವಿ.ಕೃ. ಗೋಕಾಕ್**

**'ವಿನಾಯಕ'** ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಡಾ. ವಿನಾಯಕ ಕೃಷ್ಣ ಗೋಕಾಕ್ ಅವರು **ಕ್ರಿ. ಶ. 1909** ರಲ್ಲಿ ಹಾವೇರಿ ಜಿಲ್ಲೆಯ **ಸವಣೂರಿನಲ್ಲಿ** ಜನಿಸಿದರು. ನವ್ಯಕಾವ್ಯ ಪರಂಪರೆಯ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾದ ಇವರು ಸಮುದ್ರದಾಚೆಯಿಂದ, ಜೀವನಪಾಠಗಳು, ಭಾರತ ಸಿಂಧು ರಶ್ಮಿ, ಸಮುದ್ರಗೀತೆಗಳು, ಪಯಣ, ಉಗಮ, ಇಜ್ಜೋಡು, ದ್ಯಾವಾಪೃಥಿವೀ, ಸಮರಸವೇ ಜೀವನ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಶ್ರೀಯುತರಿಗೆ ಭಾರತ ಸರ್ಕಾರವು 'ಪದ್ಮಶ್ರೀ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ. ಇವರ ಸಮಗ್ರ ಸಾಹಿತ್ಯಕ್ಕಾಗಿ 'ಭಾರತೀಯ ಜ್ಞಾನಪೀಠ ಪ್ರಶಸ್ತಿ' ನೀಡಿ ಗೌರವಿಸಿದೆ. ಇವರ 'ದ್ಯಾವಾಪೃಥಿವೀ' ಕೃತಿಗೆ 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ. ಇವರಿಗೆ ಕರ್ನಾಟಕ ವಿಶ್ವವಿದ್ಯಾಲಯವು 'ಗೌರವ ಡಾಕ್ಟರೇಟ್ ಪದವಿ'ಯನ್ನು ಹಾಗೂ ಬೆಂಗಳೂರು ವಿಶ್ವವಿದ್ಯಾಲಯವು 'ಗೌರವ ಡಿ. ಲಿಟ್' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**29. ರನ್ನ**

ಮಹಾಕವಿ **ರನ್ನನು** ಕ್ರಿ. ಶ. ಸುಮಾರು 949 ರಲ್ಲಿ (ಹತ್ತನೆಯ ಶತಮಾನದಲ್ಲಿ) ಬಾಗಲಕೋಟೆ ಜಿಲ್ಲೆಯ **ಮುದುವೊಳಲು (ಈಗಿನ ಮುಧೋಳ)** ಎಂಬ ಗ್ರಾಮದಲ್ಲಿ ಜನಿಸಿದನು. ಈತನು ಚಾಲುಕ್ಯ ಚಕ್ರವರ್ತಿ ತೈಲಪನ ಆಸ್ಥಾನದ ಕವಿಯಾಗಿದ್ದನು. ಈತನು ಚಾಲುಕ್ಯ ದೊರೆಯಾದ ತೈಲಪನ ಆಸ್ಥಾನದಲ್ಲಿದ್ದನು. ಇವನು **'ಸಾಹಸ ಭೀಮ ವಿಜಯಂ' (ಗದಾಯುದ್ಧ), 'ಅಜಿತ ತೀರ್ಥಂಕರ ಪುರಾಣ ತಿಲಕಂ', ಪರಶುರಾಮ ಚರಿತಂ', 'ಚಕ್ರೇಶ್ವರ ಚರಿತಂ'** ಎಂಬ ಕಾವ್ಯಗಳನ್ನು ರಚಿಸಿದ್ದಾನೆ. **'ರನ್ನ ಕಂದ'** ಎಂಬ ನಿಘಂಟನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ. ಇವನಿಗೆ ತೈಲಪನು **'ಕವಿ ಚಕ್ರವರ್ತಿ'** ಎಂಬ ಬಿರುದನ್ನು ನೀಡಿ ಗೌರವಿಸಿದನು. ಇವನು ಕನ್ನಡ **'ರತ್ನತ್ರಯ'**ರಲ್ಲಿ ಒಬ್ಬನಾಗಿದ್ದಾನೆ.

## VI. ಕೆಳಗಿನ ಪದ್ಯಭಾಗಕ್ಕೆ ಪ್ರಸ್ತಾರ ಹಾಕಿ, ಗಣ ವಿಭಾಗ ಮಾಡಿ, ಛಂದಸ್ಸಿನ ಹೆಸರನ್ನು ಬರೆಯಿರಿ. 1 * 3 = 3

**30. ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಮಲೆಗೆಯ್ವರಾಗಳುಂ**

| ನ | ಜ | ಭ | ಜ | ಜ | ಜ | ರ |
|---|---|---|---|---|---|---|
| ∪ ∪ ∪ | ∪ — ∪ | — ∪ ∪ | ∪ — ∪ | ∪ — ∪ | ∪ — ∪ | — ∪ — |
| ಕುರುಪ | ತಿಗಿಲ್ಲ | ದೈವಬ | ಲಮಾಜಿ | ಗೆಮೇಲ್ಮ | ಲೆಗೆಯ್ವ | ರಾಗಳುಂ |

ಈ ಮೇಲಿನ ಪದ್ಯವು ಅಕ್ಷರ ಗಣದ **'ಚಂಪಕಮಾಲಾ ವೃತ್ತ'**ದಲ್ಲಿ ರಚಿತವಾಗಿದೆ.

## VII. ಕೆಳಗಿನ ವಾಕ್ಯದಲ್ಲಿರುವ ಅಲಂಕಾರವನ್ನು ಹೆಸರಿಸಿ, ಲಕ್ಷಣ ಬರೆದು, ಸಮನ್ವಯಗೊಳಿಸಿರಿ. 1 * 3 = 3

**31. "ವಸಂತಮಾಸದಲ್ಲಿ ಹೂಬಿಟ್ಟ ಮರಗಿಡಗಳು ಮದುವಣಗಿತ್ತಿಯಂತೆ ಕಂಗೊಳಿಸುತ್ತಿದ್ದವು."**

**ಅಲಂಕಾರ** : ಉಪಮಾಲಂಕಾರ

**ಲಕ್ಷಣ** : ಎರಡು ವಸ್ತುಗಳಿಗಿರುವ ಸಾದೃಶ್ಯ ಸಂಪತ್ತನ್ನು ಪರಸ್ಪರ ಹೋಲಿಸಿ ವರ್ಣಿಸಿದರೆ ಅದು 'ಉಪಮಾಲಂಕಾರ'.

**ಉಪಮೇಯ** : ವಸಂತಮಾಸದಲ್ಲಿ ಹೂಬಿಟ್ಟ ಮರಗಿಡಗಳು

**ಉಪಮಾನ** : ಮದುವಣಗಿತ್ತಿ

**ಉಪಮಾ ವಾಚಕ** : ಅಂತೆ

**ಸಮಾನ ಧರ್ಮ** : ಕಂಗೊಳಿಸುವುದು

**ಸಮನ್ವಯ** : ಇಲ್ಲಿ ಉಪಮೇಯವಾದ ವಸಂತಮಾಸದಲ್ಲಿ ಹೂಬಿಟ್ಟ ಮರಗಿಡಗಳನ್ನು ಉಪಮಾನವಾದ ಮದುವಣಗಿತ್ತಿಗಿರುವ ಸಾದೃಶ್ಯ ಸಂಪತ್ತನ್ನು ಪರಸ್ಪರ ಹೋಲಿಸಿ ವರ್ಣಿಸಲಾಗಿದೆ. ಆದ್ದರಿಂದ ಈ ವಾಕ್ಯವು ಉಪಮಾಲಂಕಾರಕ್ಕೆ ಉದಾಹರಣೆಯಾಗಿದೆ.

**VIII. ಕೆಳಗಿನ ಗಾದೆಗಳಲ್ಲಿ ಯಾವುದಾದರೂ ಒಂದನ್ನು ಗಾದೆಯ ಮಹತ್ತ್ವದೊಂದಿಗೆ ವಿಸ್ತರಿಸಿ ಬರೆಯಿರಿ.** **1 * 3 = 3**

**32. ಕುಂಬಾರನಿಗೆ ವರುಷ ; ದೊಣ್ಣೆಗೆ ನಿಮಿಷ.**

ಗಾದೆಗಳು ವೇದಗಳಿಗೆ ಸಮಾನ ಎನ್ನುತ್ತಾರೆ. ಗಾದೆ ವೇದಕ್ಕಿಂತ ಒಂದುಪಟ್ಟು ಮಿಗಿಲಾಗಿರುವುದರಿಂದ **'ವೇದ ಸುಳ್ಳಾದರೂ ಗಾದೆ ಸುಳ್ಳಾಗದು'** ಎನ್ನುವ ನುಡಿ ಹುಟ್ಟಿತು. ಹಿರಿಯ ಜನಪದರ ಅನುಭವದ ನುಡಿಮುತ್ತುಗಳೇ ಗಾದೆಗಳು. ಬಿಂದುವಿನಂತಹ ಗಾದೆಯಲ್ಲಿ ಸಿಂಧುವಿನಂತಹ ವಿಶಾಲಾರ್ಥವು ಅಡಗಿರುತ್ತದೆ. ಅಂತಹ ಮಹತ್ತ್ವದ ಗಾದೆಗಳಲ್ಲಿ **'ಕುಂಬಾರನಿಗೆ ವರುಷ; ದೊಣ್ಣೆಗೆ ನಿಮಿಷ'** ಎನ್ನುವ ಗಾದೆಯೂ ಸಹ ಒಂದಾಗಿದೆ.

ಕುಂಬಾರನು ಸೂಕ್ತವಾದ ಮಣ್ಣನ್ನು ಆರಿಸಿ, ತಂದು, ಹದಗೊಳಿಸಿ, ಕಲಸಿ, ಚಕ್ರಕ್ಕೆ ಹಾಕಿ, ತಿರುವಿ, ಬೇಕಾದ ಆಕಾರಗಳಲ್ಲಿ ಸಾವಿರಾರು ಮಡಕೆ–ಕುಡಿಕೆಗಳನ್ನು ತಯಾರಿಸಲು ವರ್ಷಗಟ್ಟಲೆ ಕಾಲವು ಬೇಕಾಗುತ್ತದೆ. ಆದರೆ ಆ ಮಡಕೆ–ಕುಡಿಕೆಗಳನ್ನು ಒಂದು ಕೋಲಿನಿಂದ ಒಂದೆರಡು ನಿಮಿಷಗಳಲ್ಲಿ ಸುಲಭವಾಗಿ ಒಡೆದುಹಾಕಿ ಬಿಡಬಹುದು. ಇದೇರೀತಿ ಒಂದು ಮನೆ ಕಟ್ಟಲು ವರ್ಷಾನುಗಟ್ಟಲೆ ಸಮಯ ಬೇಕಾಗುತ್ತದೆ. ಅದನ್ನು ಕೆಡುಹಲು ಕೇವಲ ಒಂದೆರಡು ಗಂಟೆಗಳೇ ಸಾಕು. ಮನುಷ್ಯನು ಒಳ್ಳೆಯ ಹೆಸರನ್ನು, ಹಣವನ್ನು, ಖ್ಯಾತಿಯನ್ನು ಸಂಪಾದಿಸಲು ಬದುಕಿನ ಹಲವು ವರ್ಷಗಳು ಶ್ರಮಿಸಬೇಕಾಗುತ್ತದೆ. ಕೆಲವೇ ನಿಮಿಷಗಳ ದುಷ್ಕಾರ್ಯಗಳು ಕಷ್ಟಪಟ್ಟು ಸಂಪಾದಿಸಿದ ಒಳ್ಳೆಯತನವನ್ನು, ಹಣವನ್ನು, ಖ್ಯಾತಿಯನ್ನೆಲ್ಲ ಹಾಳುಮಾಡಿ ಬಿಡುತ್ತವೆ. **'ಕಟ್ಟುವುದು ಕಠಿಣ; ಕೆಡಹುವುದು ಸುಲಭ'** ಎನ್ನುವ ಗಾದೆಯೂ ಕೂಡ ಮೇಲಿನ ಗಾದೆಯ ಅರ್ಥವನ್ನು ಸಮರ್ಥಿಸುತ್ತದೆ.

**ಅಥವಾ**

**ತಾಳಿದವನು ಬಾಳಿಯಾನು.**

ಗಾದೆಗಳು ವೇದಗಳಿಗೆ ಸಮಾನ ಎನ್ನುತ್ತಾರೆ. ಗಾದೆ ವೇದಕ್ಕಿಂತ ಒಂದುಪಟ್ಟು ಮಿಗಿಲಾಗಿರುವುದರಿಂದ **'ವೇದ ಸುಳ್ಳಾದರೂ ಗಾದೆ ಸುಳ್ಳಾಗದು'** ಎನ್ನುವ ನುಡಿ ಹುಟ್ಟಿತು. ಹಿರಿಯ ಜನಪದರ ಅನುಭವದ ನುಡಿಮುತ್ತುಗಳೇ ಗಾದೆಗಳು. ಬಿಂದುವಿನಂತಹ ಗಾದೆಯಲ್ಲಿ ಸಿಂಧುವಿನಂತಹ ವಿಶಾಲಾರ್ಥವು ಅಡಗಿರುತ್ತದೆ. ಅಂತಹ ಮಹತ್ತ್ವದ ಗಾದೆಗಳಲ್ಲಿ **'ತಾಳಿದವನು ಬಾಳಿಯಾನು'** ಎಂಬ ಗಾದೆಯೂ ಸಹ ಒಂದಾಗಿದೆ.

"ತಾಳುವಿಕೆಗಿಂತ ಬೇರೆ ತಪವು ಇಲ್ಲ" ಎಂದಿದ್ದಾರೆ ಕನಕದಾಸರು. ಗಿಡ ನೆಟ್ಟ ಕೂಡಲೇ ಫಲ ಬಿಡಬೇಕು ಎಂದರೆ ಸಾಧ್ಯವಿಲ್ಲ. ಸಂಗೀತಾಭ್ಯಾಸ ಮಾಡಿದರೆ ಒಂದೇ ತಿಂಗಳಿನಲ್ಲಿ ಕಛೇರಿ ನೀಡುವಂತಾಗಬೇಕು ಎನ್ನುವುದು ಸಾಧ್ಯವಿಲ್ಲ. ಪ್ರತಿಯೊಂದು ಸಾಧನೆಯಲ್ಲೂ ತಾಳ್ಮೆ ಬೇಕು. ತಾಳ್ಮೆ ಎಂದರೆ ಆಮೆಗತಿಯಲ್ಲಿ ಸಾಗುವುದು ಎಂದರ್ಥವಲ್ಲ. "ಯಾವ ಸಾಧನೆಗೆ ಎಷ್ಟು ಸಮಯ ಮತ್ತು ಪ್ರಯತ್ನಗಳು ಬೇಕೋ ಅವನ್ನು ಪೂರ್ಣತೆಯಿಂದ ಮಾಡಲು ಬೇಕಾಗುವ ಶಕ್ತಿಯೇ ತಾಳ್ಮೆ; ತಾಳ್ಮೆಯಿಂದ ಕಟ್ಟಿದ್ದು ಮತ್ತು ಪಡೆದಿದ್ದು ದೀರ್ಘಕಾಲ ಬಾಳುತ್ತದೆ" ಎಂಬುದನ್ನು ಈ ಗಾದೆಯು ವಿವರಿಸುತ್ತದೆ. ಶಬರಿಯು ಶ್ರೀರಾಮನ ದರ್ಶನಕ್ಕಾಗಿ ಹಲವಾರು ವರ್ಷಗಳವರೆಗೆ ತಾಳ್ಮೆಯಿಂದ ಕಾಯ್ದು, ಶ್ರೀರಾಮನ ದರ್ಶನ ಪಡೆದು, ಮುಕ್ತಿಯನ್ನು ಹೊಂದುತ್ತಾಳೆ. ಈ ಗಾದೆಗೆ ಶಬರಿಯ ಜೀವನ ಒಂದು ಉದಾಹರಣೆಯಾಗಿದೆ.

**IX. ಕೆಳಗಿನ ವಾಕ್ಯ ಅಥವಾ ಹೇಳಿಕೆಗಳಿಗೆ ಸಂದರ್ಭ ಮತ್ತು ಸ್ವಾರಸ್ಯಗಳನ್ನು ಬರೆಯಿರಿ.** **6 * 3 = 18**

**33. "ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ."**

**ಆಯ್ಕೆ :** ಈ ವಾಕ್ಯವನ್ನು **ಶ್ರೀ ಎಂ. ಮರಿಯಪ್ಪ ಭಟ್ಟ** ಅವರು ರಚಿಸಿರುವ **'ಕನ್ನಡ ಸಂಸ್ಕೃತಿ'** ಪ್ರಬಂಧ ಸಂಕಲನದಿಂದ ಆಯ್ದ **'ನಮ್ಮ ಭಾಷೆ'** ಎಂಬ ಗದ್ಯಪಾಠದಿಂದ ಆರಿಸಲಾಗಿದೆ.

**ಸಂದರ್ಭ :** ವೈದಿಕ ಹಾಗೂ ಜೈನ ಧಾರ್ಮಿಕ ತತ್ತ್ವಗಳನ್ನು ಕನ್ನಡದಲ್ಲಿ ವಿವರಿಸಬೇಕೆಂಬ ಅಭಿಲಾಷೆಯಿಂದ ಅನೇಕ ಪಂಡಿತರು ಕನ್ನಡವನ್ನು ಸಂಸ್ಕೃತಮಯವನ್ನಾಗಿ ಮಾಡಿ, ಕನ್ನಡವನ್ನು ಕಬ್ಬಿಣದ ಕಡಲೆಯಾಗಿಸಿ, ಉದ್ದುದ್ದ ವಾಕ್ಯಗಳಲ್ಲಿ ಸಂಸ್ಕೃತ ಶಬ್ದಗಳನ್ನೇ ಬಳಸಿ, ಒಂದು ಕ್ರಿಯಾಪದವನ್ನು ಮಾತ್ರ ಕನ್ನಡದಲ್ಲಿ ಬರೆಯುತ್ತಿದ್ದರು" ಎಂದು ಹೇಳುವ ಸಂದರ್ಭದಲ್ಲಿ ಲೇಖಕರು ಕವಿ ನಯಸೇನನ ಈ ಮಾತನ್ನು ಉದಾಹರಿಸುತ್ತಾರೆ.

**ಸ್ವಾರಸ್ಯ :** ಕನ್ನಡದಲ್ಲಿ ಇತರ ಭಾಷೆಗಳ ಬಳಕೆಯನ್ನು ಎಣ್ಣೆ–ತುಪ್ಪಗಳ ಮಿಶ್ರಣಕ್ಕೆ ಹೋಲಿಸಿದ ಕವಿ ನಯಸೇನನ ಅಭಿಮತವನ್ನು ಲೇಖಕರು ಪುರಸ್ಕರಿಸಿರುವುದು ಈ ಮಾತಿನ ಸ್ವಾರಸ್ಯವಾಗಿದೆ.

**34. "ನಿನಗೊಂದು ಗುಡಿ ಮನೆ ಕಟ್ತಾ ಇದ್ದೀವಿ."**

**ಆಯ್ಕೆ :** ಈ ವಾಕ್ಯವನ್ನು **ಶ್ರೀ ದೇವನೂರು ಮಹಾದೇವ** ಅವರು ರಚಿಸಿರುವ **'ಎದೆಗೆ ಬಿದ್ದ ಅಕ್ಷರ'** ಕೃತಿಯಿಂದ ಆಯ್ದ **'ಎದೆಗೆ ಬಿದ್ದ ಅಕ್ಷರ'** ಎಂಬ ಗದ್ಯಪಾಠದಿಂದ ಆರಿಸಲಾಗಿದೆ.

**ಸಂದರ್ಭ :** ಗ್ರಾಮದೇವತೆ ಮಂಚಮ್ಮನಿಗೆ ಗುಡಿಯನ್ನು ಕಟ್ಟಲು ಜನ ಪ್ರಾರಂಭಿಸಿದಾಗ, ಒಬ್ಬನ ಮೈ ಮೇಲೆ ಗ್ರಾಮದೇವತೆ ಮಂಚಮ್ಮ ಆವಾಹಿಸಿಕೊಂಡು ಬಂದು "ಏನ್ರಯ್ಯಾ, ಏನು ಮಾಡುತ್ತಿದ್ದೀರಾ? ಎಂದು ಪ್ರಶ್ನಿಸಿದ ಸಂದರ್ಭದಲ್ಲಿ ಈ ಮಾತನ್ನು ಗ್ರಾಮದವನೊಬ್ಬನು ಮಂಚಮ್ಮ ದೇವಿಯ ಪ್ರಶ್ನೆಗೆ ಉತ್ತರ ಹೇಳುತ್ತಾನೆ.

**ಸ್ವಾರಸ್ಯ :** ಗ್ರಾಮದ ಜನರ ಮುಗ್ಧ ಭಕ್ತಿ ಮತ್ತು ತನ್ನ ಭಕ್ತರಿಗೆ ಮನೆ ಇಲ್ಲದ ಮೇಲೆ ನನಗೂ ಮನೆ ಬೇಡ ಎಂಬ ಮಂಚಮ್ಮ ದೇವತೆಯ ಮಾತು ಕಾರುಣ್ಯ ಮತ್ತು ಸಮಾನತೆಯ ದ್ಯೋತಕವಾಗಿರುವುದು ಈ ಮಾತಿನ ಸ್ವಾರಸ್ಯವಾಗಿದೆ.

**35. "ರೇಡಿಯೋ ಸಮನಾಗಿ ಕಾರ್ಯನಿರ್ವಹಿಸುತ್ತಿಲ್ಲ."**

**ಆಯ್ಕೆ :** ಈ ವಾಕ್ಯವನ್ನು **ಶ್ರೀಮತಿ ಸಾರಾ ಅಬೂಬಕರ್** ಅವರು ರಚಿಸಿರುವ **'ಚಪ್ಪಲಿಗಳು'** ಕಥಾ ಸಂಕಲನದಿಂದ ಆಯ್ದ **'ಯುದ್ಧ'** ಎಂಬ ಗದ್ಯಪಾಠದಿಂದ ಆರಿಸಲಾಗಿದೆ.

**ಸಂದರ್ಭ :** ಯುದ್ಧ ವಿಮಾನದ ಪೈಲಟ್ ವಿಮಾನದಲ್ಲಿ ಉಂಟಾದ ತಾಂತ್ರಿಕ ಸಮಸ್ಯೆಯಿಂದಾಗಿ ತುರ್ತಾಗಿ ವಿಮಾನವನ್ನು ಕೆಳಗೆ ಇಳಿಸಲು ಗ್ರೌಂಡಿನಲ್ಲಿರುವವರೊಡನೆ ರೇಡಿಯೋ ಮೂಲಕ ಸಂಪರ್ಕ ಬೆಳೆಸಲು ಪ್ರಯತ್ನಿಸಿದರು, ಅದು ಸಾಧ್ಯವಾಗುತ್ತಿರಲಿಲ್ಲ.

ಎಲ್ಲಾದರೂ ಹೇಗಾದರೂ ಇಳಿಯೋಣವೆಂದರೆ ಕತ್ತಲೆಯಲ್ಲಿ ಏನೂ ಕಾಣಿಸುತ್ತಿರಲಿಲ್ಲ. ಈ ಸಂದರ್ಭದಲ್ಲಿ ಯುದ್ಧವಿಮಾನದ ಪೈಲಟ್ ರಾಹುಲನಿಗೆ ಈ ಮಾತನ್ನು ಹೇಳಿದನು.

**ಸ್ವಾರಸ್ಯ :** ಯುದ್ಧ ವಿಮಾನದ ಪೈಲಟ್ ಮತ್ತು ಸೇನಾವೈದ್ಯನಾದ ರಾಹಿಲನ ದಯನೀಯ ಸ್ಥಿತಿ, ಹೇಗಾದರೂ ಸರಿ ರಕ್ಷಣೆಯನ್ನು ಪಡೆದು ಜೀವ ಉಳಿಸಿಕೊಳ್ಳಬೇಕೆಂಬ ಹಂಬಲ ಈ ಮಾತಿನಲ್ಲಿ ಅಭಿವ್ಯಕ್ತಗೊಂಡಿದೆ.

36. **"ವಸಂತವಾಗುತ ಮುಟ್ಟೋಣ."**

**ಆಯ್ಕೆ :** ಈ ವಾಕ್ಯವನ್ನು ಕವಿ ಜಿ. ಎಸ್. ಶಿವರುದ್ರಪ್ಪ ಅವರು ರಚಿಸಿರುವ 'ಎದೆತುಂಬಿ ಹಾಡಿದೆನು' ಕವನ ಸಂಕಲನದಿಂದ ಆಯ್ದ 'ಸಂಕಲ್ಪಗೀತೆ' ಎಂಬ ಕವಿತೆಯಿಂದ ಆರಿಸಲಾಗಿದೆ.

**ಸಂದರ್ಭ :** ಪರಿಸರ ಮಾಲಿನ್ಯದಿಂದಾಗಿ ನದೀಜಲಮೂಲಗಳು ಕಲುಷಿತವಾಗುತ್ತಿವೆ. ಹಾಗೂ ಅರಣ್ಯಸಂಪತ್ತಿನ ನಾಶದಿಂದಾಗಿ ಕಾಡುಮೇಡುಗಳು ಬರಡಾಗುತ್ತಿವೆ. ಆದ್ದರಿಂದ ನಾವು ಪರಿಸರ ಮತ್ತು ಅರಣ್ಯ ಸಂರಕ್ಷಣೆ ಮಾಡಲು ವಸಂತ ಋತುವಿನಂತೆ ಕಾಡುಮೇಡುಗಳು ಚಿಗುರೊಡೆದು ಹಸಿರಾಗಿಸುವ ಧನಾತ್ಮಕ ಮನೋಭಾವನೆಯ ದೃಢ ಸಂಕಲ್ಪವನ್ನು ಹೊಂದಿರಬೇಕು ಎಂದು ಹೇಳುವ ಸಂದರ್ಭದಲ್ಲಿ ಈ ಮಾತನ್ನು ಕವಿಗಳು ಹೇಳುತ್ತಾರೆ.

**ಸ್ವಾರಸ್ಯ :** ನಾವು ಜಲಸಂಪತ್ತು ಮತ್ತು ಸಸ್ಯಸಂಪತ್ತನ್ನು ಸಂರಕ್ಷಿಸುವುದು ಇಂದಿನ ಅಗತ್ಯವಾಗಿದೆ ಎಂಬುದು ಈ ಮಾತಿನಲ್ಲಿ ಬಹುಸ್ವಾರಸ್ಯಪೂರ್ಣವಾಗಿ ಅಭಿವ್ಯಕ್ತಗೊಂಡಿದೆ.

37. **"ವಿಲಾಯಿತಿಯಿಂದ ಹುಕುಮ ಕಳಿಸಿತು ಕುಂಪಣಿ ಸರಕಾರ."**

**ಆಯ್ಕೆ** : ಈ ವಾಕ್ಯವನ್ನು ಡಾ. ಬಿ. ಎಸ್. ಗದ್ದಗಿ ಮಠ ಅವರು ಸಂಪಾದಿಸಿರುವ 'ಕನ್ನಡ ಜನಪದ ಗೀತೆಗಳು' ಕೃತಿಯಿಂದ ಆಯ್ದ 'ಹಲಗಲಿಯ ಬೇಡರು' ಎಂಬ ಲಾವಣಿಯಿಂದ ಆರಿಸಲಾಗಿದೆ.

**ಸಂದರ್ಭ** : ಕ್ರಿ.ಶ. 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಂತರ ಬ್ರಿಟಿಷ್ ಸರ್ಕಾರ **"**ಅನುಮತಿ ಇಲ್ಲದೆ ಭಾರತೀಯರು ಶಸ್ತ್ರಾಸ್ತ್ರಗಳನ್ನು ಹೊಂದುವಂತಿಲ್ಲ ಮತ್ತು ತಮ್ಮಲ್ಲಿರುವ ಆಯುಧಗಳನ್ನು ಸರ್ಕಾರಕ್ಕೆ ಒಪ್ಪಿಸಬೇಕು**"** ಎಂಬ ಆದೇಶವನ್ನು ನೀಡಿದ ಸಂದರ್ಭದಲ್ಲಿ ಈ ಮಾತು ಬಂದಿದೆ. ಲಾವಣಿಕಾರನು ಈ ಮಾತನ್ನು ಹೇಳುತ್ತಾನೆ.

**ಸ್ವಾರಸ್ಯ** : ಬ್ರಿಟಿಷ್ ಕಂಪನಿ ಸರ್ಕಾರದ ಆದೇಶ ಹಾಗೂ ಭಾರತೀಯರ ಮೇಲಿನ ಬ್ರಿಟಿಷರ ದರ್ಪ, ದಬ್ಬಾಳಿಕೆಯು ಈ ಮಾತಿನಲ್ಲಿ ಅಭಿವ್ಯಕ್ತಗೊಂಡಿದೆ.

38. **"ಈಗಳೊಂದಡಕೆಯುಮಿಲ್ಲ ಕೈಯೊಳ್."**

**ಆಯ್ಕೆ : –** ಈ ವಾಕ್ಯವನ್ನು ಡಿ. ಎಲ್. ನರಸಿಂಹಾಚಾರ್ಯ ಅವರು ಸಂಪಾದಿಸಿರುವ **ಆದಿ ಮಹಾಕವಿ ಪಂಪ ಅವರು** ರಚಿಸಿರುವ **'ವಿಕ್ರಮಾರ್ಜುನ ವಿಜಯಂ'** ಮಹಾಕಾವ್ಯದ ದ್ವಿತೀಯಾಶ್ವಾಸದಿಂದ ಆಯ್ದ **'ಕೆಮ್ಮನೆ ಮೀಸೆವೊತ್ತನೇ'** ಎಂಬ ಪದ್ಯಭಾಗದಿಂದ ಆರಿಸಲಾಗಿದೆ.

**ಸಂದರ್ಭ :–** ದ್ರೋಣನು ಬಡತನದಿಂದ ಬಳಲುವ ಸಮಯದಲ್ಲಿ ತನ್ನ ಮಗನೊಡನೆ ಸಹಾಯವನ್ನು ಯಾಚಿಸಿ, ಪರಶುರಾಮನ ಬಳಿಗೆ ಬಂದ ಸಂದರ್ಭದಲ್ಲಿ ಈ ಮಾತನ್ನು ಪರಶುರಾಮನು ದ್ರೋಣನಿಗೆ ಹೇಳುತ್ತಾನೆ.

**ಸ್ವಾರಸ್ಯ :–** ಪರಶುರಾಮನು ದ್ರೋಣನ್ನು ಕುರಿತು **"**ನನ್ನ ಆಭರಣಗಳನ್ನು ಬೇಡಿದವರಿಗೆ ಕೊಟ್ಟೆನು. ಭೂಮಂಡಲವನ್ನು ಗುರುವಿಗೆ ಕೊಟ್ಟೆನು. ಈಗ ನನ್ನಲ್ಲಿ ಒಂದು ಅಡಕೆಯೂ ಇಲ್ಲ**"** ಎಂದು ಹೇಳುತ್ತಾನೆ. ಇಲ್ಲಿ **'**ಕೈಯೊಳೊಂದಡಕೆಯುಂ ಇಲ್ಲ**'** ಎಂಬ ನುಡಿಗಟ್ಟಿನ ಬಳಕೆಯು ಮನೋಹರವಾಗಿದೆ.

## X. ಕೆಳಗಿನ ಪದ್ಯಭಾಗವನ್ನು ಪೂರ್ಣಗೊಳಿಸಿ ಬರೆಯಿರಿ. 1 * 4 = 4

39. **ಹಸುರಾಗಸ;** ಹಸುರು ಮುಗಿಲು;
ಹಸುರು ಗದ್ದೆಯಾ ಬಯಲು;
ಹಸುರಿನ ಮಲೆ; ಹಸುರು ಕಣಿವೆ;
ಹಸುರು ಸಂಜೆಯೀ **ಬಿಸಿಲೂ !**

**ಅಥವಾ**

**ಹೊಸ** ಹೂವಿನ ಕಂಪು ಹಸುರು !
ಎಲರಿನ ತಂಪೂ ಹಸುರು;
ಹಕ್ಕಿಯ ಕೊರಲಿಂಪು ಹಸುರು !
ಹಸುರು **ಇಳೆಯುಸಿರೊ !**

## XI. ಕೆಳಗಿನ ಪದ್ಯಭಾಗವನ್ನು ಓದಿ ಅರ್ಥಮಾಡಿಕೊಂಡು, ಅಡಕವಾಗಿರುವ ಮೌಲ್ಯವನ್ನಾಧರಿಸಿ ಸಾರಾಂಶವನ್ನು ಬರೆಯಿರಿ. 1 * 4 = 4

40. **ಉರ್ವಿಯೊಳ್ ಕೌಸಲ್ಯೆ ಪಡೆದ ಕುವರಂ ರಾಮ ।**
**ನೊರ್ವನೇ ವೀರನಾತನ ಯಜ್ಞತುರಗಮಿದು ।**
**ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದ ಲೇಖನವನೋದಿ ॥**
**ಗರ್ವಮಂ ಬಿಡಿಸದಿರ್ದೊಡೆ ತನ್ನ ಮಾತೆಯಂ ।**
**ಸರ್ವಜನಮುಂ ಬಂಜೆಯೆನ್ನದಿರ್ದಪುದೆ ತನ ।**
**ಗುರ್ವತೋಳ್ಗಳಿವೇತಕೆಂದು ಸಲೆ ವಾಸಿಯಂ ತೊಟ್ಟು ಲವನುರಿದೆದ್ದನು ॥**

ಈ ಪದ್ಯಭಾಗವನ್ನು **ಕವಿ ಲಕ್ಷ್ಮೀಶನು** ರಚಿಸಿರುವ **'ಜೈಮಿನಿ ಭಾರತ'** ಮಹಾಕಾವ್ಯದಿಂದ ಆಯ್ದ **'ವೀರಲವ'** ಎಂಬ ಪದ್ಯಭಾಗದಿಂದ ಆರಿಸಲಾಗಿದೆ.
ಲವನು ತನ್ನ ಆಶ್ರಮದ ತೋಟವನ್ನು ಧ್ವಂಸ ಮಾಡಿದ ಶ್ರೀರಾಮನ ಯಜ್ಞಾಶ್ವದ ಹಣೆಯಲ್ಲಿದ್ದ ಪಟ್ಟಿಯ ಬರೆಹವನ್ನು ಓದಿ ಅದನ್ನು ಕಟ್ಟಿಹಾಕಲು ನಿರ್ಧರಿಸಿದ ಸಂದರ್ಭದಲ್ಲಿ ಕವಿಯು ಈ ಮಾತನ್ನು ಹೇಳುತ್ತಾನೆ.
**"ಭೂಮಂಡಲದಲ್ಲಿ ಕೌಸಲ್ಯೆಯು ಪಡೆದ ಕುಮಾರನಾದ ರಾಮನೊಬ್ಬನೇ ವೀರನು, ಇದು ಅವನ ಯಜ್ಞ ಕುದುರೆಯು. ಇದನ್ನು ನಿಭಾಯಿಸಲು ಸಾಮರ್ಥ್ಯವುಳ್ಳವರು ಯಾರೇ ಆದರು ತಡೆಯಲಿ" ಎಂದು ಇದ್ದ ಬರೆಹವನ್ನು ಓದಿದ ಲವನು "ರಾಮನ ಅಹಂಕಾರವನ್ನು ಬಿಡಿಸದಿದ್ದರೆ ತನ್ನ ತಾಯಿಯನ್ನು ಎಲ್ಲ ಜನರೂ ಬಂಜೆ ಎನ್ನುವುದಿಲ್ಲವೇ? ನನಗೆ ತೋಳ್ಬಲವಿರುವುದು ಏತಕೆ?" ಎಂದು ಹೇಳಿ ಕೋಪಗೊಂಡು ರಾಮನ ಗರ್ವವನ್ನು ಮುರಿಯುವ ಪ್ರತಿಜ್ಞೆಯನ್ನು ಕೈಗೊಂಡನು.**
ಈ ಪದ್ಯಭಾಗದಲ್ಲಿ ಲವನ ಧೈರ್ಯ, ಶೌರ್ಯ, ವೀರತನ, ತಾಯಿಯ ಮೇಲಿನ ಗೌರವ ಮತ್ತು ಕಾರ್ಯತತ್ಪರತೆ ಮೊದಲಾದ ಮೌಲ್ಯಯುತ ಅಂಶಗಳು ಈ ಪದ್ಯದಲ್ಲಿ ಅಭಿವ್ಯಕ್ತಗೊಂಡಿವೆ.

## XII. ಕೆಳಗಿನ ಪ್ರಶ್ನೆಗಳಿಗೆ ಎಂಟು ಅಥವಾ ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ. 2 * 4 = 8

**41. ರಾಮನ ದರ್ಶನದಿಂದ ಶಬರಿಯ ಚಿಂತೆ ಹಿಂಗಿಹೋದ ಸಂದರ್ಭವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.**

ಶಬರಿಯು ರಾಮಲಕ್ಷ್ಮಣರನ್ನು ಕಂಡು ಹಿಗ್ಗಿ, ಸಂತಸದಿಂದ ರುಚಿಕರವಾದ ಹಣ್ಣುಗಳನ್ನು ನೀಡಿ ಸತ್ಕರಿಸುತ್ತಾಳೆ. ರಾಮನನ್ನು ಕಂಡ ತಾನು ಪರಮಸುಖಿಯೆಂದು ನರ್ತಿಸುತ್ತಾಳೆ. ರಾಮನೂ ಕೂಡ "ನಿನ್ನ ಆದರದಿಂದ ನಾವು ಸುಖಿ, ನಿನಗೆ ನಾವು ಋಣಿ" ಎನ್ನುತ್ತಾನೆ. ಶಬರಿಯು ಕಣ್ಣೀರು ತುಂಬಿಕೊಂಡು "ನನ್ನ ಜಾಡನ್ನು ಹಿಡಿದು ಬಂದು ಸಂತಸ ನೀಡಿದಿರಿ, ಹಸಿವು ತೃಷೆ ಹಿಂಗಿತೇ? ನಾನೊಬ್ಬಳು ಬಡವಿ, ನನ್ನ ಮೇಲೆ ಮರುಕ ತೋರಿದಿರಾ?" ಎನ್ನುತ್ತಾಳೆ. ಶ್ರೀರಾಮನು "ನಿನ್ನ ಆತಿಥ್ಯದಲ್ಲಿ ಸ್ವಲ್ಪವೂ ಕೊರತೆಯಿಲ್ಲ, ನಮ್ಮ ಅರಮನೆಗಿಂತ ನಿನ್ನ ಆಶ್ರಮವೇ ಚೆಂದ, ನೀನು ನಮ್ಮ ತಾಯಿಯಂತೆ" ಎನ್ನುತ್ತಾನೆ. ಶಬರಿಯು "ನಿನ್ನ ರೂಪದಂತೆ ನಿನ್ನ ಮಾತು ಸುಂದರ ಹಾಗೂ ಉದಾರ. ನಾನು ಧನ್ಯಳಾದೆ. ಸಿದ್ಧರ ವರ ನನಗೆ ಫಲಿಸಿತು. ಗುರುಪೂಜೆಯನ್ನು ಮಾಡಿದ ಪುಣ್ಯ ನನಗೆ ಇಂದು ಸೇರಿತು. ನನ್ನ ಚಿಂತೆಯೆಲ್ಲ ಹಿಂಗಿ ಹೋಯಿತು" ಎನ್ನುತ್ತಾಳೆ. ಶ್ರೀರಾಮನು "ದುಃಖವನ್ನು ಮರೆಸಿ, ಶಾಂತಿ ನೀಡುವ ಈ ವನದಲ್ಲಿ ಶುದ್ಧ ಪ್ರೇಮ ಮೂರ್ತಿ ನೀನು" ಎಂದು ಶಬರಿಯನ್ನು ಬಾಯಿತುಂಬ ಹೊಗಳುತ್ತಾನೆ.

**ಅಥವಾ**

**"ತಾಳುವಿಕೆಗಿಂತ ಮಿಗಿಲಾದ ತಪವಿಲ್ಲ" ಎಂಬ ಮಾತು ಶಬರಿಯ ಪಾಲಿಗೆ ಹೇಗೆ ನಿಜವಾಗಿದೆ? ವಿವರಿಸಿ.**

ಶಬರಿಯು ಮತಂಗ ಋಷಿಯ ಆಶ್ರಮದಲ್ಲಿ ಇದ್ದ ತಪಸ್ವಿನಿ. ಮತಂಗ ಋಷಿಗಳ ಪ್ರೀತಿಯ ಶಿಷ್ಯೆ ಶಬರಿ. ಸಿದ್ಧರಾದ ಮತಂಗ ಋಷಿಗಳು ತಮ್ಮ ಅಂತ್ಯಕಾಲದಲ್ಲಿ ಶಬರಿಯ ಮೇಲೆ ಕರುಣೆಯನ್ನು ತೋರಿ "ರಾಮಲಕ್ಷ್ಮಣರು ಈ ಆಶ್ರಮಕ್ಕೆ ಬರುತ್ತಾರೆ. ನಿನಗೆ ರಾಮಲಕ್ಷ್ಮಣರ ದರ್ಶನದಿಂದ ಒಳ್ಳೆಯದಾಗುತ್ತದೆ. ನಿನ್ನಿಷ್ಟಾರ್ಥ ನೆರವೇರುತ್ತದೆ" ಎಂದು ಹೇಳಿದ್ದರು. ಗುರುಗಳ ಈ ಮಾತನ್ನು ನಂಬಿದ ಶಬರಿಯು ಶ್ರೀರಾಮನ ಆಗಮನಕ್ಕಾಗಿ ಪ್ರತಿನಿತ್ಯ ಹಂಬಲಿಸಿ ಕಾಯುತ್ತಿದ್ದಳು. ಶಬರಿಯು ಗುರುಗಳ ಮಾತಿನ ಮೇಲೆ ಇಟ್ಟ ನಂಬಿಕೆ ಹಾಗೂ ಶ್ರೀರಾಮನಿಗಾಗಿ ಹಂಬಲಿಸುತ್ತ ಕಾಯುತ್ತಿದ್ದ ಅವಳ ತಾಳ್ಮೆಯು ಹುಸಿಯಾಗಲಿಲ್ಲ. ಮತಂಗ ಋಷಿಗಳು ಶಬರಿಗೆ ಹೇಳಿದ ಮಾತಿನಂತೆ ಶ್ರೀರಾಮಲಕ್ಷ್ಮಣರು ಶಬರಿಯ ಆಶ್ರಮಕ್ಕೆ ಭೇಟಿ ನೀಡುತ್ತಾರೆ. ಶಬರಿಯು ಶ್ರೀರಾಮನ ದರ್ಶನದಿಂದ ಪುಳಕಿತಳಾಗುತ್ತಾಳೆ. ಶಬರಿಯು ರಾಮಲಕ್ಷ್ಮಣರನ್ನು ಕಂಡು ಬೆರಗಾಗಿ, ಹತ್ತಿರಕ್ಕೆ ಬಂದು, ಮೈಯನ್ನು ಮುಟ್ಟಿ, ಕಾಲಿಗೆ ಬಿದ್ದು ನಮಸ್ಕರಿಸಿ, ಕೈಯನ್ನು ಕಣ್ಣಿಗೆ ಒತ್ತಿಕೊಳ್ಳುತ್ತಾಳೆ. "ಅಯ್ಯೋ, ಏನೂ ಸಿದ್ಧತೆಯಿಲ್ಲ; ನಿನ್ನೆಯಷ್ಟು ಚೆನ್ನವಿಲ್ಲ" ಎಂದು ಹಂಬಲಿಸಿ, ತನ್ನ ಮನದ ಬಯಕೆಯಂತೆ ಬಗೆಬಗೆಯ ಸುವಾಸನೆಯುಳ್ಳ ಹೂಮಾಲೆಯನ್ನು ಕೊರಳಿಗೆ ಹಾಕಿ, ಅಬ್ಬಾ ಎಂದು ಹಿಗ್ಗಿಹಿಗ್ಗಿ ಸಂತಸಪಡುತ್ತಾಳೆ. "ಜಗದಲ್ಲಿ ಇದರಷ್ಟು ರುಚಿಯಾದ ಹಣ್ಣೇ ಇಲ್ಲ. ನಿಮಗೆಂದೆ ತಂದೆನು" ಎಂದು ಹೇಳುತ್ತ ತಾನೇ ಅವರ ಕೈಯಲ್ಲಿ ಸವಿಯಾದ ಹಣ್ಣುಗಳನ್ನು ನೀಡಿ ಉಪಚರಿಸುತ್ತಾಳೆ. ನಂತರ ಶಬರಿಯು ಶ್ರೀರಾಮನಲ್ಲಿ ತನಗೆ ಮುಕ್ತಿಯನ್ನು ನೀಡುವಂತೆ ಬೇಡಿಕೊಂಡು; ವೇದಿಯಲ್ಲಿದ್ದ ಅಗ್ನಿಯನ್ನು ಪ್ರವೇಶಿಸಿ ಮುಕ್ತಿಯನ್ನು ಪಡೆದುಕೊಳ್ಳುತ್ತಾಳೆ. ಮುನಿಗಳ ಮಾತನ್ನು ನಂಬಿ, ಹಲವಾರು ವರ್ಷಗಳಿಂದ ರಾಮನ ದರ್ಶನಕ್ಕಾಗಿ ಸಹನೆಯಿಂದ ಕಾಯುತ್ತ, ಶ್ರೀರಾಮನು ತನ್ನ ಬಳಿಗೆ ಬರುವ ಸುದಿನವನ್ನು ಎದುರು ನೋಡುತ್ತಿದ್ದ ಶಬರಿಗೆ ರಾಮನ ದರ್ಶನವಾಗುತ್ತದೆ. ಶಬರಿಯ ಮನದಾಸೆ ಈಡೇರುತ್ತದೆ. ಹಾಗಾಗಿ **"ತಾಳುವಿಕೆಗಿಂತ ಮಿಗಿಲಾದ ತಪವಿಲ್ಲ"** ಎಂಬ ಮಾತು ಶಬರಿಯ ಪಾಲಿಗೆ ನಿಜವಾಯಿತು.

**42. ಶ್ರೀಕೃಷ್ಣನು ಕರ್ಣನಿಗೆ ಒಡ್ಡಿದ ಆಮಿಷಗಳನ್ನು ಕುರಿತು ಬರೆಯಿರಿ.**

ಕೃಷ್ಣನು "ಕರ್ಣ, ನಿಮಗೂ, ಯಾದವರಿಗೂ, ಕೌರವರಿಗೂ ವಂಶ ಗೌರವದಲ್ಲಿ ಭೇದವಿಲ್ಲ. ನಿನ್ನ ಮೇಲೆ ಆಣೆಯಿಟ್ಟು ಹೇಳುತ್ತೇನೆ ನಾವೆಲ್ಲರೂ ಒಂದೇ ವಂಶದವರು. ನೀನು ನಿಜವಾಗಿಯು ಈ ಸಾಮ್ರಾಜ್ಯದ ಒಡೆಯ. ಆದರೆ ನಿನಗೆ ಹಿಂದೆ ನಡೆದ ಘಟನೆಯ ಬಗ್ಗೆ ಅರಿವಿಲ್ಲ" ಎಂದು ಹೇಳುತ ಕರ್ಣನ ಕಿವಿಯಲ್ಲಿ ಭಯವನ್ನು ಬಿತ್ತಿದನು. ಕುಂತಿಯು ಪಡೆದ ಐದು ಮಂತ್ರಗಳಲ್ಲಿ ಮೊದಲಿಗ ನೀನು, ನಿನ್ನ ನಂತರ ಧರ್ಮರಾಯ, ಕಲಿಭೀಮ, ಅರ್ಜುನರು ಜನಿಸಿದರು. ಬಳಿಕ ಐದನೆಯ ಮಂತ್ರದಲ್ಲಿ ಮಾದ್ರಿಯಲ್ಲಿ ನಕುಲ ಸಹದೇವರು ಹುಟ್ಟಿದರು. ನಿನ್ನನ್ನು ಹಸ್ತಿನಾಪುರ ರಾಜ್ಯದ ರಾಜನನ್ನಾಗಿ ಮಾಡುವೆನು. ಪಾಂಡವ ಕೌರವ ರಾಜರು ನಿನ್ನನ್ನು ಓಲೈಸುವರು. ನಿನಗೆ ಎರಡು ವಂಶವು ಮರುಮಾತನಾಡದೆ ಸೇವೆಯನ್ನು ಮಾಡುವುವು. ನೀನು ದುರ್ಯೋಧನನ ಬಾಯೆಂಜಲಿಗೆ ಕೈಯೊಡ್ಡುವುದೇ? ಎಡಭಾಗದಲ್ಲಿ ಕೌರವೇಂದ್ರ ಸಮೂಹ, ಬಲಭಾಗದಲ್ಲಿ ಪಾಂಡು ಮಕ್ಕಳ ಸಮೂಹ, ಮುಂದುಗಡೆ ಮಾದ್ರ ಮಾಗಧ ಯಾದವಾದಿಗಳು, ಮಧ್ಯದಲ್ಲಿ ನೀನು ರಾಜಸಭೆಯಲ್ಲಿ ಪ್ರಕಾಶಿಸುವ ವಿಶೇಷ ಸೊಬಗನ್ನು ತೊರೆಯುವುದು ಸರಿಯೇ? ದುರ್ಯೋಧನ ನುಡಿಸಲು 'ಒಡೆಯ ಅನುಗ್ರಹವಾಗಲಿ' ಎಂಬುದು ನಿನಗೆ ಕಷ್ಟವಾಗುವುದಿಲ್ಲವೇ?" ಎಂದು ಹೇಳಿ, ಸಾಮ್ರಾಜ್ಯದ ಆಮಿಷವನ್ನು ಒಡ್ಡಿದನು.

**ಅಥವಾ**

**ಶ್ರೀಕೃಷ್ಣನ ಪ್ರಲೋಭನೆಗೆ ಒಳಗಾಗದೆ ಅಸಹಾಯಕನಾಗಿ ನೋವು ಸಂಕಟದಿಂದ ಬಳಲುವ ಕರ್ಣನ ಮನಸ್ಥಿತಿಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.**

ಕೃಷ್ಣನು ಕರ್ಣನಿಗೆ ಆಮಿಷಗಳನ್ನು ಒಡ್ಡಿದಾಗ ಕರ್ಣನು ದುಃಖಗೊಂಡು ಮನದೊಳಗೆ "ಅಯ್ಯೋ, ದುರ್ಯೋಧನನಿಗೆ ಕೇಡಾದುದು, ಹರಿಯ ಹಗೆತನವು ಹೊಗೆ ತೋರದೆ ಸುಟ್ಟುಹಾಕುವುದಲ್ಲದೆ; ಸುಮ್ಮನೆ ಹೋಗುವುದೆ' ಎಂದುಕೊಂಡನು. "ನಾನು ರಾಜ್ಯದ ಸಿರಿಸಂಪತ್ತಿಗೆ ಸೋಲುವವನಲ್ಲ, ಪಾಂಡವರು ಕೌರವರು ಸೇವೆಯನ್ನು ಮಾಡುವುದು ನನಗೆ ಇಷ್ಟವಿಲ್ಲ. ಆದರೆ ನನ್ನನ್ನು ಕಾಪಾಡಿದ ಒಡೆಯನಾದ ದುರ್ಯೋಧನನಿಗೆ ಶತ್ರುಗಳ ಶಿರವನ್ನು ಕಡಿದು ತಂದು ಒಪ್ಪಿಸುವ ಆವೇಶದಲ್ಲಿದ್ದೆನು. ಆದರೆ ಕೃಷ್ಣನು ನನ್ನ ಜನ್ಮ ರಹಸ್ಯವನ್ನು ತಿಳಿಸಿ ದುರ್ಯೋಧನನನ್ನು ಕೊಂದನು. ವೀರ ದುರ್ಯೋಧನನೇ ನನ್ನ ಒಡೆಯನು, ಆತನ ಹಗೆಯೆ ನನ್ನ ಹಗೆ, ಆತನ ಅಭಿಮಾನವೇ ನನ್ನ ಅಭಿಮಾನವು, ದುರ್ಯೋಧನನ ಹಾದಿಯನ್ನೇ ಅನುಸರಿಸುತ್ತೇನೆ" ಎಂದು ಮನದಲ್ಲಿ ನೊಂದುಕೊಂಡನು. ನಂತರ ಕರ್ಣನು "ಕೃಷ್ಣ ಕೇಳು, ನಾಳಿನ ಸಮರದಲ್ಲಿ ಪಾಂಡವರಲ್ಲಿ ನನ್ನ ನಿಜ ಪರಾಕ್ರಮದ ಶ್ರೇಷ್ಠತೆಯನ್ನು ತೋರುವೆನು. ನಾಳಿನ ಕೌರವರ ಮತ್ತು ಪಾಂಡವರ ಚತುರಂಗ ಬಲದ ನಡುವಿನ ಭಾರತ ಯುದ್ಧವು ಮೃತ್ಯುದೇವತೆಗೆ ಭೋಜನ ಕೂಟ ಆಗುವುದು. ನಾನು ಕೌರವನ ಉಪಕಾರದ ಋಣ ತೀರಿಸುವಂತೆ ಹೋರಾಡುವೆನು. ಯುದ್ಧರಂಗದಲ್ಲಿ ಲೆಕ್ಕವಿಲ್ಲದಷ್ಟು ವೀರಯೋಧರ ಕೊಂದು ಹಾಕುವೆನು. ನಾನು ನನ್ನ ಒಡೆಯನಿಗಾಗಿ ಪ್ರಾಣವನ್ನು ಬಿಡುವೆನು. ಆದರೆ ಸೂರ್ಯನ ಮೇಲಾಣೆ ನಿನ್ನ ಪ್ರೀತಿಯ ಪಾಂಡವರನ್ನು ನೋಯಿಸೆನು" ಎಂದು ಮಾತು ಕೊಟ್ಟನು.

**XIII. ಕೆಳಗಿನ ಗದ್ಯಭಾಗವನ್ನು ಮನಸ್ಸಿನಲ್ಲಿ ಓದಿಕೊಂಡು, ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ. 1 * 4 = 4 (2+2)**

**43. ಇಂದು ಯುರೋಪ್, ಅಮೆರಿಕಾ, ಆಸ್ಟ್ರೇಲಿಯಾ, ಜಪಾನ್‌ಗಳಲ್ಲಿ ಹಿಂದೆಂದಿಗಿಂತ ಹೆಚ್ಚಿನ ಜನಜಾಗೃತಿಯ ಕಾರ್ಯಕ್ರಮಗಳು ನಡೆಯುತ್ತಿವೆ. ಜೂನ್ 5ರ ವಿಶ್ವ ಪರಿಸರ ದಿನಾಚರಣೆಯ ಜೊತೆಗೆ ಅವರು ಏಪ್ರಿಲ್ 22 ರಂದು 'ಭೂದಿನ' ಆಚರಿಸುತ್ತಾರೆ. ಏಪ್ರಿಲ್ 26 ರಂದು 'ಚರ್ನೋಬಿಲ್ ದಿನ' ಆಗಸ್ಟ್ 6 ರಂದು 'ಹಿರೋಶಿಮಾ ದಿನ', ಡಿಸೆಂಬರ್ 3 ರಂದು 'ಭೂಪಾಲ್ ದಿನ'. ಹೀಗೆ ಭೂಮಿಗೆ ಆಪತ್ತು ಬಂದ ದಿನಗಳನ್ನೆಲ್ಲಾ ನೆನೆಪಿಸುವ ಹಾಗೂ ಜನರನ್ನು ಜಾಗೃತರನ್ನಾಗಿ ಮಾಡುವ ಕಾರ್ಯಕ್ರಮಗಳಲ್ಲಿ ಎಂದಿಗಿಂತ ಹೆಚ್ಚಿನ ಸಂಖ್ಯೆಯ ಜನ ಭಾಗವಹಿಸುತ್ತಾರೆ. ಎಷ್ಟೋ ಬಾರಿ ಇಂಥ 'ದಿನಾಚರಣೆ'ಗಳಿಗಾಗಿ ಕಾಯದೇ, ಅವಕಾಶ ಬಂದಾಗಲೆಲ್ಲಾ ಒಂದುಗೂಡುತ್ತಾರೆ. ಮತ್ತೆ ಅಲ್ಲಿನವರು ಹಾಕಿಕೊಳ್ಳುವ ಕಾರ್ಯಕ್ರಮಗಳು ತೀರ ವಿಶಿಷ್ಟವಾಗಿರುತ್ತದೆ. 'ಗ್ರೀನ್ ಪೀಸ್'ನಂತಹ ಪೃಥ್ವಿ ರಕ್ಷಣಾ ಯೋಧರ ಕೆಚ್ಚೆದೆಯ ಸಾಹಸಗಳನ್ನಂತೂ ಬಿಡಿ; ದಟ್ಟ ಹೊಗೆ ಕಾರುವ ಕಾರ್ಖಾನೆಗಳ ಚಿಮಣಿಗಳ ಮೇಲೆ ಹತ್ತಿ 'ಶುದ್ಧ ಗಾಳಿ ನಮ್ಮೆಲ್ಲರ ಹಕ್ಕು' ಎಂದು ಘೋಷಣೆ ಬರೆಯುತ್ತಾರೆ. ಹೆಮ್ಮರಗಳನ್ನು ಕಡಿದು ಸಾಗಿಸುವ ಕಾಡಿನ ರಸ್ತೆಯಲ್ಲಿ ಹೊಂಡ ತೋಡಿ, ತಮಗೆ ತಾವೇ ಆನೆ ಸರಪಳಿ ಬಿಗಿದು, ಬೀಗ ಹಾಕಿ, ಕೂತು ಬಿಡುತ್ತಾರೆ. ಅಂದದ ತುಪ್ಪಳಕ್ಕೆಂದು ಮುದ್ದು ಸೀಲ್ ಪ್ರಾಣಿಗಳ ನೆತ್ತಿಯ ಮೇಲೆ ದೊಣ್ಣೆಯಿಂದ ಠಪ್ಪೆಂದು ಕುಟ್ಟಿ ಕೊಲ್ಲುವ ದುಷ್ಟರ ವಿರುದ್ಧ ಈ ಯೋಧರ ಉಪಾಯವೇನು ಗೊತ್ತೆ? ಅವರಿಗಿಂತ ಮೊದಲೇ ಇವರು ಹಿಮಪ್ರಾಂತ್ಯಕ್ಕೆ ಹೋಗಿ, ಸೀಲ್ ಪ್ರಾಣಿಗಳ ಮೇಲೆ ಎನಾಮಲ್ ಬಣ್ಣ ಸುರಿದು ಅವುಗಳ ಚರ್ಮದ ಅಂದಗೆಡಿಸಿ ಬರುತ್ತಾರೆ. ಕಾರ್ಖಾನೆಗಳು ಕೊಳವೆಯ ಮೂಲಕ ಕೊಳೆಯನ್ನು ಆಳ ಸಮುದ್ರಕ್ಕೆ ಹರಿಬಿಡುತ್ತಿದ್ದರೆ ಗ್ರೀನ್ ಪೀಸ್‌ನ ಮುಳುಗುವೀರರು ಆ ಕೊಳವೆಯ ಬಾಯಿಯನ್ನು ನೀರಿನೊಳಗೆ ಕಟ್ಟಿ ಬರುತ್ತಾರೆ. ಹೀಗೆ ಜೀವವನ್ನೇ ಪಣಕ್ಕಿಟ್ಟು ಗಾಂಧೀಜಿಯವರ ಮಾದರಿಯ ಅಹಿಂಸಾತ್ಮಕ ಸೆಣಸಾಟ ನಡೆಸುತ್ತಾರೆ.**

**ಪ್ರಶ್ನೆಗಳು :**

**(ಅ) ಪರಿಸರ ಸಂರಕ್ಷಣೆಯಲ್ಲಿ ಗ್ರೀನ್ ಪೀಸ್ ಯೋಧರು ಹೇಗೆ ಸೆಣಸಾಟ ನಡೆಸುತ್ತಾರೆ?**

'ಗ್ರೀನ್ ಪೀಸ್'ನಂತಹ ಪೃಥ್ವಿ ರಕ್ಷಣಾ ಯೋಧರ ಕೆಚ್ಚೆದೆಯ ಸಾಹಸಗಳನ್ನಂತೂ ಬಿಡಿ; ದಟ್ಟ ಹೊಗೆ ಕಾರುವ ಕಾರ್ಖಾನೆಗಳ ಚಿಮಣಿಗಳ ಮೇಲೆ ಹತ್ತಿ 'ಶುದ್ಧ ಗಾಳಿ ನಮ್ಮೆಲ್ಲರ ಹಕ್ಕು' ಎಂದು ಘೋಷಣೆ ಬರೆಯುತ್ತಾರೆ. ಹೆಮ್ಮರಗಳನ್ನು ಕಡಿದು ಸಾಗಿಸುವ ಕಾಡಿನ ರಸ್ತೆಯಲ್ಲಿ ಹೊಂಡ ತೋಡಿ, ತಮಗೆ ತಾವೇ ಆನೆ ಸರಪಳಿ ಬಿಗಿದು, ಬೀಗ ಹಾಕಿ, ಕೂತು ಬಿಡುತ್ತಾರೆ. ಅಂದದ ತುಪ್ಪಳಕ್ಕೆಂದು ಮುದ್ದು ಸೀಲ್ ಪ್ರಾಣಿಗಳ ನೆತ್ತಿಯ ಮೇಲೆ ದೊಣ್ಣೆಯಿಂದ ಠಪ್ಪೆಂದು ಕುಟ್ಟಿ ಕೊಲ್ಲುವ ದುಷ್ಟರ ವಿರುದ್ಧ ಈ ಯೋಧರ ಉಪಾಯವೇನು ಗೊತ್ತೆ? ಅವರಿಗಿಂತ ಮೊದಲೇ ಇವರು ಹಿಮಪ್ರಾಂತ್ಯಕ್ಕೆ ಹೋಗಿ, ಸೀಲ್ ಪ್ರಾಣಿಗಳ ಮೇಲೆ ಎನಾಮಲ್ ಬಣ್ಣ ಸುರಿದು ಅವುಗಳ ಚರ್ಮದ ಅಂದಗೆಡಿಸಿ ಬರುತ್ತಾರೆ. ಕಾರ್ಖಾನೆಗಳು ಕೊಳವೆಯ ಮೂಲಕ ಕೊಳೆಯನ್ನು ಆಳ ಸಮುದ್ರಕ್ಕೆ ಹರಿಬಿಡುತ್ತಿದ್ದರೆ ಗ್ರೀನ್ ಪೀಸ್‌ನ ಮುಳುಗುವೀರರು ಆ ಕೊಳವೆಯ ಬಾಯಿಯನ್ನು ನೀರಿನೊಳಗೆ ಕಟ್ಟಿ ಬರುತ್ತಾರೆ. ಹೀಗೆ ಜೀವವನ್ನೇ ಪಣಕ್ಕಿಟ್ಟು ಗಾಂಧೀಜಿಯವರ ಮಾದರಿಯ ಅಹಿಂಸಾತ್ಮಕ ಸೆಣಸಾಟ ನಡೆಸುತ್ತಾರೆ.

**(ಬ) ಯುರೋಪ್, ಅಮೆರಿಕಾಗಳಲ್ಲಿ ಆಚರಿಸುವ ದಿನಾಚರಣೆಗಳ ಕುರಿತು ಬರೆಯಿರಿ.**

ಯುರೋಪ್, ಅಮೆರಿಕಾ, ಆಸ್ಟ್ರೇಲಿಯಾ, ಜಪಾನ್‌ಗಳಲ್ಲಿ ಹಿಂದೆಂದಿಗಿಂತ ಹೆಚ್ಚಿನ ಜನಜಾಗೃತಿಯ ಕಾರ್ಯಕ್ರಮಗಳು ನಡೆಯುತ್ತಿವೆ. ಜೂನ್ 5ರ ವಿಶ್ವ ಪರಿಸರ ದಿನಾಚರಣೆಯ ಜೊತೆಗೆ ಅವರು ಏಪ್ರಿಲ್ 22 ರಂದು 'ಭೂದಿನ' ಆಚರಿಸುತ್ತಾರೆ. ಏಪ್ರಿಲ್ 26 ರಂದು 'ಚರ್ನೋಬಿಲ್ ದಿನ' ಆಗಸ್ಟ್ 6 ರಂದು 'ಹಿರೋಶಿಮಾ ದಿನ', ಡಿಸೆಂಬರ್ 3 ರಂದು 'ಭೂಪಾಲ್ ದಿನ'. ಹೀಗೆ ಭೂಮಿಗೆ ಆಪತ್ತು ಬಂದ ದಿನಗಳನ್ನೆಲ್ಲಾ ನೆನೆಪಿಸುವ ಹಾಗೂ ಜನರನ್ನು ಜಾಗೃತರನ್ನಾಗಿ ಮಾಡುವ ಕಾರ್ಯಕ್ರಮಗಳಲ್ಲಿ ಎಂದಿಗಿಂತ ಹೆಚ್ಚಿನ ಸಂಖ್ಯೆಯ ಜನ ಭಾಗವಹಿಸುತ್ತಾರೆ. ಎಷ್ಟೋ ಬಾರಿ ಇಂಥ 'ದಿನಾಚರಣೆ'ಗಳಿಗಾಗಿ ಕಾಯದೇ, ಅವಕಾಶ ಬಂದಾಗಲೆಲ್ಲಾ ಒಂದುಗೂಡುತ್ತಾರೆ. ಮತ್ತೆ ಅಲ್ಲಿನವರು ಹಾಕಿಕೊಳ್ಳುವ ಕಾರ್ಯಕ್ರಮಗಳು ತೀರ ವಿಶಿಷ್ಟವಾಗಿರುತ್ತದೆ.

**XIV. ಕೆಳಗಿನ ಯಾವುದಾದರೂ ಒಂದಕ್ಕೆ ಕೊಟ್ಟಿರುವ ಮಾಹಿತಿಯನ್ನು ಆಧರಿಸಿ ಪತ್ರವನ್ನು ಬರೆಯಿರಿ.** **1 * 5 = 5**

**44. ನಿಮ್ಮನ್ನು ಮೈಸೂರಿನ ರಾಮಕೃಷ್ಣ ನಗರದ ಸರ್ಕಾರಿ ಪ್ರೌಢಶಾಲೆಯ 'ಅನರ್ಘ್ಯ ಎಂದು ಭಾವಿಸಿಕೊಂಡು, ಶಾಲೆಗೆ ಅಗತ್ಯವಾಗಿ ಬೇಕಾಗಿರುವ ಒಳಾಂಗಣ ಕ್ರೀಡಾ ಪರಿಕರಗಳನ್ನು ಒದಗಿಸಿಕೊಡುವಂತೆ ಕೋರಿ, 'ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿ'ಗೆ ಪತ್ರವನ್ನು ಬರೆಯಿರಿ.**

ಇಂದ

ಅನರ್ಘ್ಯ
10 ನೆಯ ತರಗತಿ
ಸರ್ಕಾರಿ ಪ್ರೌಢಶಾಲೆ
ರಾಮಕೃಷ್ಣ ನಗರ
ಮೈಸೂರು

ದಿನಾಂಕ : 10–01–2025
ಸ್ಥಳ : ಮೈಸೂರು

ಇವರಿಗೆ

ಮಾನ್ಯ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳು
ಮೈಸೂರು ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳ ಇಲಾಖೆ ಕಚೇರಿ
ಮೈಸೂರು

ಮಾನ್ಯರೇ,

ವಿಷಯ : ನಮ್ಮ ಶಾಲೆಗೆ ಅಗತ್ಯವಾಗಿ ಬೇಕಾಗಿರುವ ಒಳಾಂಗಣ ಕ್ರೀಡಾ ಪರಿಕರಗಳನ್ನು ಒದಗಿಸಿಕೊಡುವಂತೆ ಕೋರಿ ಮನವಿ.

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ ತಮ್ಮಲ್ಲಿ ವಿನಂತಿಸಿಕೊಳ್ಳುವುದೇನೆಂದರೆ ನಮ್ಮ ಶಾಲೆಯಲ್ಲಿ ಸುಮಾರು 1000 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ನಮ್ಮ ಒಳಾಂಗಣ ಕ್ರೀಡೆಗೆ ಬೇಕಾಗುವಂತಹ ಕೊಠಡಿಯು ಸಹ ಇರುತ್ತದೆ. ಆದರೆ ಒಳಾಂಗಣ ಕ್ರೀಡೆಗೆ ಅಗತ್ಯವಾಗಿ ಬೇಕಾಗಿರುವ ಕ್ರೀಡಾ ಪರಿಕರಗಳ ಕೊರತೆ ಇರುತ್ತದೆ. ಇದರಿಂದ ಎಲ್ಲಾ ವಿದ್ಯಾರ್ಥಿಗಳು ಏಕಕಾಲದಲ್ಲಿ ಒಳಾಂಗಣ ಕ್ರೀಡೆಯಲ್ಲಿ ಭಾಗವಹಿಸಲು ಸಾಧ್ಯವಾಗುತ್ತಿಲ್ಲ. ಕರ್ನಾಟಕ ಸರ್ಕಾರವು ಒಳಾಂಗಣ ಕ್ರೀಡೆಗಳಿಗೆ ಹೆಚ್ಚಿನ ಮಹತ್ತ್ವವನ್ನು ನೀಡುವ ಸಲುವಾಗಿ ಒಳಾಂಗಣ ಕ್ರೀಡಾ ಪರಿಕರಗಳನ್ನು ಅಗತ್ಯವಿರುವ ಶಾಲೆಗೆ ಉಚಿತವಾಗಿ ಕೊಡುವ ಆದೇಶವನ್ನು ಮತ್ತು ಅವಕಾಶವನ್ನು ನಿಮ್ಮ ಇಲಾಖೆಗೆ ನೀಡಿರುವುದು ತಿಳಿದುಬಂದಿದೆ. ಆದ್ದರಿಂದ ತಾವು ದಯವಿಟ್ಟು ನಮ್ಮ ಶಾಲೆಗೆ ಅಗತ್ಯವಾಗಿ ಬೇಕಾಗಿರುವ ಒಳಾಂಗಣ ಕ್ರೀಡಾ ಪರಿಕರಗಳನ್ನು ಉಚಿತವಾಗಿ ನೀಡಬೇಕೆಂದು ಈ ಮೂಲಕ ಸವಿನಯದಿಂದ ಕೇಳಿಕೊಳ್ಳುತ್ತೇನೆ. ನಮ್ಮ ಶಾಲೆಗೆ ಅಗತ್ಯವಾಗಿ ಬೇಕಾಗಿರುವ ಕ್ರೀಡಾ ಪರಿಕರಗಳ ವಿವರವಾದ ಪಟ್ಟಿಯನ್ನು ಲಗತ್ತಿಸಿದ್ದೇನೆ.

ಈ ನನ್ನ ಕೋರಿಕೆಯು ಬಹುಬೇಗ ಈಡೇರುವುದೆಂದು ನಂಬಿರುತ್ತೇನೆ.

ವಂದನೆಗಳೊಡನೆ

ತಮ್ಮ ನಂಬುಗೆಯ
ಸಹಿ/–
(ಅನರ್ಘ್ಯ)

ಹೊರವಿಳಾಸ

| ಇಂದ | ಇವರಿಗೆ |
|---|---|
| ಅನರ್ಘ್ಯ<br>10 ನೆಯ ತರಗತಿ<br>ಸರ್ಕಾರಿ ಪ್ರೌಢಶಾಲೆ<br>ರಾಮಕೃಷ್ಣ ನಗರ<br>ಮೈಸೂರು | ಮಾನ್ಯ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳು<br>ಮೈಸೂರು ಜಿಲ್ಲಾ ಯುವಜನ ಸೇವಾ ಮತ್ತು<br>ಕ್ರೀಡಾಧಿಕಾರಿಗಳ ಇಲಾಖೆ ಕಚೇರಿ<br>ಮೈಸೂರು |

**ಅಥವಾ**

**ನಿಮ್ಮನ್ನು ಹಾವೇರಿಯ ಮೊರಾರ್ಜಿ ವಸತಿ ಶಾಲೆಯ 'ಮಾಲತಿ' ಎಂದು ಭಾವಿಸಿಕೊಂಡು, ಶಾಲೆಯಲ್ಲಿ ಆಚರಿಸಿದ 'ಪ್ರಜಾಪ್ರಭುತ್ವ ದಿನಾಚರಣೆ'ಯನ್ನು ಕುರಿತು ಬಾಗಲಕೋಟೆಯಲ್ಲಿ ವಾಸವಾಗಿರುವ 'ಶಾರದಾ' ಎಂಬ ಹೆಸರಿನ ತಾಯಿಗೆ ಪತ್ರವನ್ನು ಬರೆಯಿರಿ.**

ಕ್ಷೇಮ ಶ್ರೀ

ದಿನಾಂಕ : 10–01–2025
ಮಾಲತಿ
10 ನೆಯ ತರಗತಿ
ಮೊರಾರ್ಜಿ ದೇಸಾಯಿ ವಸತಿ ಶಾಲೆ
ಹಾವೇರಿ

ಮಾತೃಶೀ ಅವರಿಗೆ ನಿಮ್ಮ ಪ್ರೀತಿಯ ಮಗಳು ಮಾಡುವ ಶಿರಸಾಷ್ಟಾಂಗ ನಮಸ್ಕಾರಗಳು.

ಇಲ್ಲಿ ನಾವೆಲ್ಲರೂ ಕ್ಷೇಮವಾಗಿದ್ದೇವೆ. ಅಲ್ಲಿ ತಾವೆಲ್ಲರೂ ಕ್ಷೇಮವಾಗಿರುವಿರೆಂದು ನಂಬಿರುತ್ತೇನೆ.

ನಾನು ಚೆನ್ನಾಗಿ ಅಧ್ಯಯನ ಮಾಡುತ್ತಿದ್ದೇನೆ. ಈ ಬಾರಿಯ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಅತ್ಯುನ್ನತ ದರ್ಜೆಯಲ್ಲಿ ತೇರ್ಗಡೆಯಾಗುವೆನೆಂಬ ಭರವಸೆಯಿದೆ. ನಿಮ್ಮ ಪ್ರೀತಿ ಮತ್ತು ಸಹಕಾರದಿಂದ ನನಗೆ ಇದು ಸಾಧ್ಯವಾಗುತ್ತದೆ.

ನಮ್ಮ ಶಾಲೆಯಲ್ಲಿ ದಿನಾಂಕ : 15–09–2024 ರಂದು ನಮ್ಮ ಶಾಲೆಯಲ್ಲಿ ಅಂತಾರಾಷ್ಟ್ರೀಯ ಪ್ರಜಾಪ್ರಭುತ್ವ ದಿನಾಚರಣೆ' ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ನಮ್ಮ ಶಾಲೆಯ ಮುಖ್ಯಶಿಕ್ಷಕರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಮಾನ್ಯ ಶಾಸಕರು ಮುಖ್ಯ ಅತಿಥಿಗಳಾಗಿ ಆಗಮಿಸಿ, ಪ್ರಜಾಪ್ರಭತ್ವದ ಮಹತ್ತ್ವವನ್ನು ಕುರಿತು ಉಪನ್ಯಾಸ ನೀಡಿದರು. ಮಾನ್ಯ ಶಾಸಕರು ಪ್ರಜಾಪ್ರಭುತ್ವ ದಿನ ಮಹತ್ತ್ವವನ್ನು ಕುರಿತು "ಕ್ರಿ. ಶ. 2007 ರಲ್ಲಿ ವಿಶ್ವಸಂಸ್ಥೆಯ ಯುನೈಟೆಡ್ ನೇಷನ್ಸ್ ಜನರಲ್ ಅಸೆಂಬ್ಲಿಯು ಪ್ರಜಾಪ್ರಭುತ್ವದ ತತ್ತ್ವಗಳನ್ನು ಉತ್ತೇಜಿಸುವ ಮತ್ತು ಎತ್ತಿಹಿಡಿಯುವ ಉದ್ದೇಶದಿಂದ ಪ್ರತಿವರ್ಷ ಸೆಪ್ಟೆಂಬರ್ 15 ರಂದು 'ಅಂತಾರಾಷ್ಟೀಯ ಪ್ರಜಾಪ್ರಭುತ್ವ ದಿನ'ವನ್ನಾಗಿ ಆಚರಿಸಲು ನಿರ್ಧರಿಸಿತು. ತನ್ನ ಎಲ್ಲಾ ಸದಸ್ಯ ರಾಷ್ಟ್ರಗಳು ಮತ್ತು ಸಂಘಸಂಸ್ಥೆಗಳು ಈ ದಿನವನ್ನು ಆಚರಿಸಲು ಸೂಚಿಸಿತು. ವಿಶ್ವದಾದ್ಯಂತ ಎಲ್ಲೆಡೆಯು ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಜನರಿಗೆ ಪ್ರಜಾಪ್ರಭುತ್ವದ ಮಹತ್ತ್ವವನ್ನು, ಮೌಲ್ಯವನ್ನು ಮತ್ತು ಸಾಮಾನ್ಯ ಲಕ್ಷಣಗಳ ಮಾಹಿತಿಯನ್ನು ತಿಳಿಸುವುದರ ಮೂಲಕ ಪ್ರಜಾಪ್ರಭುತ್ವದ ಯಶಸ್ಸಿಗೆ ಶ್ರಮಿಸುವಂತೆ ತಿಳಿಸುವುದು ಈ ದಿನದ ವಿಶೇಷವಾಗಿದೆ. ಪ್ರಜಾಪ್ರಭುತ್ವದಿಂದ ಮಾನವರಿಗೆ ಸ್ವಾತಂತ್ರ್ಯ ದೊರೆಯುತ್ತದೆ. ಸಂವಿಧಾನ ಕೊಟ್ಟಿರುವ ಮಾನವ ಹಕ್ಕುಗಳು ಮತ್ತು ಕರ್ತವ್ಯಗಳ ಬಗ್ಗೆ ಜಾಗೃತಿಯನ್ನು ಮೂಡಿಸುವುದು. ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ" ಎಂದು ತಿಳಿಸಿದರು. ಅವರು ವಿದ್ಯಾರ್ಥಿಗಳೊಡನೆ ಸಂವಾದ ನಡೆಸಿ, ವಿದ್ಯಾರ್ಥಿಗಳು ಪ್ರಜಾಪ್ರಭುತ್ವದ ಬಗ್ಗೆ ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿದರು. ಕಾರ್ಯಕ್ರಮ ತುಂಬಾ ಚೆನ್ನಾಗಿ ಮೂಡಿ ಬಂದಿತು.

ನಾನು ಊರಿಗೆ ಬಂದಾಗ ಈ ಬಗ್ಗೆ ನಿಮಗೆ ಹೆಚ್ಚಿನ ವಿಷಯಗಳನ್ನು ತಿಳಿಸುವೆನು. ತಂದೆಯವರಿಗೆ ನನ್ನ ಶಿರಸಾಷ್ಟಾಂಗ ನಮಸ್ಕಾರಗಳನ್ನು ತಿಳಿಸಿ. ನನ್ನ ಸಹೋದರ ಸಹೋದರಿಯರಿಗೆ ನನ್ನ ಸವಿನೆನಪುಗಳನ್ನು ತಿಳಿಸಿ. ಈ ಪತ್ರದಲ್ಲಿ ತಪ್ಪುಗಳಿದ್ದರೆ ಕ್ಷಮಿಸಿ. ಎಲ್ಲಾ ವಿಷಯಕ್ಕೂ ಈ ಪತ್ರವನ್ನು ಕಂಡಕೂಡಲೇ ಮರುಪತ್ರವನ್ನು ಬರೆಯಿರಿ.

ವಂದನೆಗಳೊಡನೆ

ನಿಮ್ಮ ಪ್ರೀತಿಯ ಮಗಳು
ಸಹಿ/–
(ಮಾಲತಿ)

ಹೊರವಿಳಾಸ

| ಇಂದ | ಇವರಿಗೆ |
|---|---|
| ಮಾಲತಿ<br>10 ನೆಯ ತರಗತಿ<br>ಮೊರಾರ್ಜಿ ದೇಸಾಯಿ ವಸತಿ ಶಾಲೆ<br>ಹಾವೇರಿ | ಶ್ರೀಮತಿ ಶಾರದಾ<br>ಬಸವೇಶ್ವರ ಬಡಾವಣೆ<br>ಬಾಗಲಕೋಟೆ |

**XV. ಕೆಳಗಿನ ಯಾವುದಾದರೂ ಒಂದು ವಿಷಯಕ್ಕೆ ಹದಿನೈದು ವಾಕ್ಯಗಳಿಗೆ ಕಡಿಮೆಯಿಲ್ಲದಂತೆ ಪ್ರಬಂಧವನ್ನು ಬರೆಯಿರಿ. 1 * 5 = 5**

**45. ಮೂಢನಂಬಿಕೆಗಳನ್ನು ತೊಡೆದು ಹಾಕುವಲ್ಲಿ ವಿದ್ಯಾರ್ಥಿಗಳ ಪಾತ್ರ.**

**ಪೀಠಿಕೆ :** ಮೂಢನಂಬಿಕೆಗಳು ಎಂದರೆ ವಾಸ್ತವಿಕ ಆಧಾರ ಇಲ್ಲದೆ ಅಂದಾಜು, ಭಯ ಅಥವಾ ಪರಂಪರೆಯಿಂದ ಬಂದ ತಪ್ಪು ನಂಬಿಕೆಗಳನ್ನು ಅಂಗೀಕರಿಸುವ ಪ್ರಕ್ರಿಯೆ. ಇವು ಸಾಮಾನ್ಯವಾಗಿ ವೈಜ್ಞಾನಿಕ ಅಥವಾ ತಾರ್ಕಿಕ ಆಧಾರಗಳಿಲ್ಲದ ನಂಬಿಕೆಗಳಾಗಿರುತ್ತವೆ. ಇವು ವ್ಯಕ್ತಿಗಳ ನಡತೆ, ಚಟುವಟಿಕೆ, ನಿರ್ಧಾರಗಳ ಮೇಲೆ ಪ್ರಭಾವ ಬೀರುತ್ತವೆ. ಮೂಢನಂಬಿಕೆಗಳು ಸಮಾಜದ ಪ್ರಗತಿಗೆ ದೊಡ್ಡ ಅಡಚಣೆಯಾಗಿವೆ. ವಿಜ್ಞಾನ ಮತ್ತು ತರ್ಕದ ಈ ಯುಗದಲ್ಲೂ ಮೂಢನಂಬಿಕೆಗಳು ಜನರ ಬದುಕಿನಲ್ಲಿ ಆಳವಾಗಿ ಬೇರೂರಿವೆ. ಇವುಗಳನ್ನು ತೊಡೆದು ಹಾಕುವಲ್ಲಿ ವಿದ್ಯಾರ್ಥಿಗಳು ಪ್ರಮುಖ ಪಾತ್ರವನ್ನು ವಹಿಸಬಹುದು.

**ವಿಷಯ ನಿರೂಪಣೆ :** ವಿದ್ಯಾರ್ಥಿಗಳು ದೇಶದ ಭವಿಷ್ಯ. ಅವರು ಶಿಕ್ಷಣದ ಪ್ರಭಾವದಿಂದ ವೈಜ್ಞಾನಿಕ ಮನೋಭಾವ ಮತ್ತು ತರ್ಕಶಕ್ತಿಯನ್ನು ಬೆಳೆಸಿಕೊಂಡು, ಜನರಲ್ಲಿ ಆಲೋಚನೆ ಮಾಡುವ ಶಕ್ತಿಯನ್ನು ಹುಟ್ಟುಹಾಕಬೇಕು ಮೊದಲಿಗೆ ವಿದ್ಯಾರ್ಥಿಗಳು ಸ್ವತಃ

ವಿದ್ಯಾವಂತರಾಗಬೇಕು ಮತ್ತು ಮೂಢನಂಬಿಕೆಗಳಿಗೆ ಬಲಿಯಾಗದೆ ತರ್ಕಬದ್ಧವಾಗಿ ಆಲೋಚಿಸಬೇಕು. ವಿದ್ಯಾರ್ಥಿಗಳು ವೈಜ್ಞಾನಿಕ ಮನೋಭಾವನೆಯಿಂದ ವಿಚಾರಗಳನ್ನು ತಿಳಿದುಕೊಂಡು ಸಮಾಜದ ಅಜ್ಞಾನವನ್ನು ಹೋಗಲಾಡಿಸಲು ಪ್ರಯತ್ನಿಸಬೇಕು. ವಿದ್ಯಾರ್ಥಿಗಳು ಮೂಢನಂಬಿಕೆಗಳನ್ನು ತೊಡೆದು ಹಾಕುವ ಉಪನ್ಯಾಸಗಳು, ಚರ್ಚೆಗಳು, ಪ್ರಜ್ಞಾವಂತರ ಜಾಗೃತಿ ಶಿಬಿರಗಳಲ್ಲಿ ಮತ್ತು ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು. ಇಂತಹ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಜನರು ಭಾಗವಹಿಸುವಂತೆ ಮನವಿಯನ್ನು ಮಾಡಿಕೊಳ್ಳುವುದರ ಮೂಲಕ ಜನರಲ್ಲಿ ಜಾಗೃತಿಯನ್ನು ಮೂಡಿಸಬೇಕು. ಸಮೂಹ ಮಾಧ್ಯಮಗಳು, ಸಾಮಾಜಿಕ ಜಾಲತಾಣಗಳ ಮೂಲಕ ವೈಜ್ಞಾನಿಕವಾದ ಮತ್ತು ವೈಚಾರಿಕವಾದ ಲೇಖನಗಳನ್ನು ಬರೆಯುವುದರ ಮೂಲಕ ಮೂಢನಂಬಿಕೆಗಳಿಂದ ಆಗುವ ಹಾನಿಗಳ ಬಗ್ಗೆ ಮಾಹಿತಿಗಳನ್ನು ಹಂಚಿಕೊಳ್ಳಬೇಕು. ವೈಜ್ಞಾನಿಕವಾದ ಮತ್ತು ವೈಚಾರಿಕವಾದ ಸಂವಾದಗಳು, ಮಾಹಿತಿಗಳು ವಿದ್ಯಾರ್ಥಿಗಳಲ್ಲಿ ಕೇವಲ ತರ್ಕಶಕ್ತಿಯ ಪರಿಣಾಮ ಮಾತ್ರವಲ್ಲದೆ ಮಾನವೀಯ ಮೌಲ್ಯಗಳನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಸಮಾಜದ ಜನರಲ್ಲಿ ವಿಶ್ವಾಸ, ವಿವೇಕ ಮತ್ತು ನಂಬಿಕೆಗಳನ್ನು ಮೂಡಿಸಲು ವಿದ್ಯಾರ್ಥಿಗಳು ಪ್ರಬುದ್ಧ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು. ವಿದ್ಯಾರ್ಥಿಗಳು ವೈಜ್ಞಾನಿಕ ಸತ್ಯ ಮತ್ತು ಪ್ರಾಮುಖ್ಯತೆಗಳನ್ನು ಉಲ್ಲೇಖಿಸಿ ಹೊಸ ತಲೆಮಾರಿಗೆ ದಾರಿದೀಪವಾಗಬೇಕು.

**ಉಪಸಂಹಾರ :** ಇದೆಲ್ಲದರೊಂದಿಗೆ ವಿದ್ಯಾರ್ಥಿಗಳು ಮೂಢನಂಬಿಕೆಗಳನ್ನು ತೊಡೆದು ಹಾಕುವ ಪ್ರಯತ್ನವನ್ನು ತಮ್ಮ ಮನೆಯಿಂದಲೇ ಪ್ರಾರಂಭಿಸಬೇಕು. ಮನೆಯ ಸದಸ್ಯರಿಗೆ ತರ್ಕಬದ್ಧವಾದ ವೈಜ್ಞಾನಿಕ ಸತ್ಯಗಳನ್ನು ಪರಿಚಯಿಸಬೇಕು. ನೈತಿಕ ಶಿಕ್ಷಣದ ಮೂಲಕ ಕುಟುಂಬದ ಹಾಗೂ ಸಮಾಜದ ಜನರಲ್ಲಿ ಜಾಗೃತಿಯನ್ನು ಮೂಡಿಸಬೇಕು. ಈ ನಿಟ್ಟಿನಲ್ಲಿ ಮೂಢನಂಬಿಕೆಗಳನ್ನು ತೊಡೆದು ಹಾಕುವಲ್ಲಿ ವಿದ್ಯಾರ್ಥಿಗಳ ಪಾಲ್ಗೊಳ್ಳುವಿಕೆ ಅತ್ಯಂತ ಅಗತ್ಯ. ವಿದ್ಯಾರ್ಥಿಗಳು ತಮ್ಮ ಜ್ಞಾನ, ತರ್ಕ ಮತ್ತು ಪರಿಶ್ರಮದಿಂದ ವೈಚಾರಿಕ ಮತ್ತು ವೈಜ್ಞಾನಿಕ ಮನೋಭಾವದ ಸಮಾಜದ ನಿರ್ಮಾಣಕ್ಕೆ ಪ್ರಮುಖ ಪಾತ್ರವನ್ನು ವಹಿಸಬಹುದು ಎನ್ನುವುದು ನನ್ನ ಅಭಿಪ್ರಾಯವಾಗಿದೆ.

**ಅಥವಾ**

**ಶಾಲೆಗಳಲ್ಲಿ ಮೌಲ್ಯ ಶಿಕ್ಷಣದ ಮಹತ್ತ್ವ.**

**ಪೀಠಿಕೆ :** ಮೌಲ್ಯ ಶಿಕ್ಷಣವು ವ್ಯಕ್ತಿಯ ನೈತಿಕ, ಆಧ್ಯಾತ್ಮಿಕ, ಸಾಮಾಜಿಕ ಮತ್ತು ಭಾವನಾತ್ಮಕ ಗುಣಗಳನ್ನು ಬೆಳೆಸುವ ಒಂದು ಶೈಕ್ಷಣಿಕ ಪ್ರಕ್ರಿಯೆಯಾಗಿದೆ. ಇದು ಮಕ್ಕಳಲ್ಲಿ ಮಾನವೀಯತೆ, ಪ್ರಾಮಾಣಿಕತೆ, ಸಹಾನುಭೂತಿ, ಪ್ರೀತಿ, ಶ್ರದ್ಧೆ, ಸಹಿಷ್ಣುತೆ ಮತ್ತು ನೀತಿಬದ್ಧ ಜೀವನ ಮೌಲ್ಯಗಳನ್ನು ಬೆಳೆಸಲು ಸಹಾಯ ಮಾಡುತ್ತದೆ. ಮೌಲ್ಯ ಶಿಕ್ಷಣದ ಉದ್ದೇಶ ವಿದ್ಯಾರ್ಥಿಗಳನ್ನು ಉತ್ತಮ ವ್ಯಕ್ತಿತ್ವದ ಮಾದರಿಗಳನ್ನು ರೂಪಿಸುವುದಾಗಿದೆ. ಇದು ಕೇವಲ ಶೈಕ್ಷಣಿಕ ಜ್ಞಾನವನ್ನು ಮಾತ್ರ ನೀಡದೆ ಜೀವನದಲ್ಲಿ ಒಳ್ಳೆಯ ಮತ್ತು ಕೆಟ್ಟದ್ದರ ನಡುವಿನ ವ್ಯತ್ಯಾಸವನ್ನು ತಿಳಿಯಲು ಮಾರ್ಗದರ್ಶನ ನೀಡುತ್ತದೆ. ಮೌಲ್ಯ ಶಿಕ್ಷಣವು ವ್ಯಕ್ತಿಯ ಆಂತರಿಕ ಶಕ್ತಿ ಮತ್ತು ಮಾನವೀಯ ಗುಣಗಳ ಅಭಿವೃದ್ಧಿಗೆ ದಾರಿ ಮಾಡಿಕೊಡುತ್ತದೆ.

**ವಿಷಯ ನಿರೂಪಣೆ :** ಮೌಲ್ಯ ಶಿಕ್ಷಣವು ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಾಸಕ್ಕೆ ಅತ್ಯಂತ ಪ್ರಮುಖವಾಗಿದ್ದು, ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಅದರ ಪಾತ್ರ ಅನಿವಾರ್ಯವಾಗಿದೆ. ಶೈಕ್ಷಣಿಕ ಪ್ರಗತಿಯ ಜೊತೆಗೆ ಮೌಲ್ಯ ಶಿಕ್ಷಣದ ಮೂಲಕ ವಿದ್ಯಾರ್ಥಿಗಳಲ್ಲಿ ಮಾನವೀಯ ಮತ್ತು ನೈತಿಕ ಗುಣಗಳನ್ನು ಬೆಳೆಸಬೇಕು. ಶಾಲೆಗಳು ಕೇವಲ ಪಾಠಗಳನ್ನು ಕಲಿಸುವ ಸ್ಥಳವಲ್ಲ, ಅವು ವಿದ್ಯಾರ್ಥಿಗಳಿಗೆ ಉತ್ತಮ ಮಾನವೀಯ ಮತ್ತು ನೈತಿಕ ಮೌಲ್ಯಗಳನ್ನು ಕಲಿಸುವ ಸ್ಥಳಗಳು. ಮೌಲ್ಯ ಶಿಕ್ಷಣವು ಪ್ರಾಮಾಣಿಕತೆ, ಪ್ರೀತಿ, ಸಹಾನುಭೂತಿ ಮತ್ತು ಸಮಾಜಸೇವೆ ಮೊದಲಾದ ಗುಣಗಳನ್ನು ಉತ್ತೇಜಿಸುತ್ತದೆ. ಒಬ್ಬ ವ್ಯಕ್ತಿಯು ಸಮಾಜದಲ್ಲಿ ಉತ್ತಮ ವ್ಯಕ್ತಿಯಾಗಿ ಬೆಳೆಯಲು ಕೇವಲ ವಿದ್ಯೆ, ಬುದ್ಧಿ ಇದ್ದರೆ ಸಾಲದು ನೈತಿಕತೆಯು ಬಹಳ ಮುಖ್ಯ. ಇಂದಿನ ತಂತ್ರಜ್ಞಾನ ಯುಗದಲ್ಲಿ ವಿದ್ಯಾರ್ಥಿಗಳು ಕೆಟ್ಟ ಹಾಗೂ ತಪ್ಪು ಪ್ರಭಾವಗಳಿಗೆ ಒಳಗಾಗುವ ಸಾಧ್ಯತೆ ಹೆಚ್ಚು. ಮೌಲ್ಯ ಶಿಕ್ಷಣವು ವಿದ್ಯಾರ್ಥಿಗಳಿಗೆ ಒಳ್ಳೆಯದು ಮತ್ತು ಕೆಟ್ಟದ್ದು; ತಪ್ಪು ಮತ್ತು ಸರಿಗಳ ನಡುವಿನ ವ್ಯತ್ಯಾಸವನ್ನು ತಿಳಿಸಿ, ಸದ್ಗುಣಿಗಳಾಗಲು ಪ್ರೇರಣೆ ನೀಡುತ್ತದೆ. ಶಾಲಾ ಶಿಕ್ಷಣದ ಒಂದು ಪ್ರಮುಖ ಅಂಶವೆಂದರೆ ಅದು ಸಮಾನತೆ ಮತ್ತು ಸಹಬಾಳ್ವೆಯನ್ನು ಉನ್ನತಮಟ್ಟಕ್ಕೆ ತರುವುದಾಗಿದೆ. ವಿದ್ಯಾರ್ಥಿಗಳು ಶೈಕ್ಷಣಿಕ ಪರಿಸರದಲ್ಲಿ ಒಟ್ಟಿಗೆ ಕಾರ್ಯನಿರ್ವಹಿಸುವ ಮೂಲಕ ವಿವಿಧ ಸಾಂಸ್ಕೃತಿಕ ಮತ್ತು ಧಾರ್ಮಿಕ ಹಿನ್ನೆಲೆಯ ಜನರೊಡನೆ ಹೇಗೆ ಬದುಕಬೇಕೆಂಬುದನ್ನು ಕಲಿಯುತ್ತಾರೆ.

**ಉಪಸಂಹಾರ :** ಮೌಲ್ಯ ಶಿಕ್ಷಣವು ವ್ಯಕ್ತಿಯ ಸಾಮಾಜಿಕ ಮತ್ತು ಭಾವನಾತ್ಮಕ ಜೀವನದ ಮೇಲೆ ಪ್ರಭಾವವನ್ನು ಬೀರುತ್ತದೆ. ಆದ್ದರಿಂದ ಶಾಲಾ ಪಠ್ಯಕ್ರಮದಲ್ಲಿ ಮೌಲ್ಯ ಶಿಕ್ಷಣವನ್ನು ಕಡ್ಡಾಯವಾಗಿ ಸೇರಿಸಬೇಕು. ತರಗತಿಯಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ಮೌಲ್ಯ ಶಿಕ್ಷಣದ ಮಹತ್ತ್ವವನ್ನು ತಿಳಿಸಬೇಕು. ಇದರಿಂದ ಶಾಲೆಗಳಲ್ಲಿ ಮೌಲ್ಯ ಶಿಕ್ಷಣದ  ಮೂಲಕ ಉತ್ತಮ ಪೀಳಿಗೆಯನ್ನು ನಿರ್ಮಿಸಲು ಸಾಧ್ಯವಾಗುತ್ತದೆ. ಇದರಿಂದ ಸಮಾಜದ ಪ್ರಗತಿ, ಶಾಂತಿ ಮತ್ತು ಏಕತೆಯು ಸಾಧ್ಯವಾಗುತ್ತದೆ. ಹೀಗಾಗಿ ಶಾಲೆಗಳಲ್ಲಿ ಮೌಲ್ಯ ಶಿಕ್ಷಣವು ಮಹತ್ತ್ವಪೂರ್ಣವಾದದ್ದು ಎನ್ನುವುದು ನನ್ನ ಅಭಿಪ್ರಾಯವಾಗಿದೆ.

---- 0 ----

# ನಿಮ್ಮ ಶಾಲೆಯ ಉತ್ತಮ ಫಲಿತಾಂಶಕ್ಕಾಗಿ ನಮ್ಮ ಪ್ರಕಟಣೆಗಳು














ನಿಮ್ಮ ಪ್ರೀತಿಯ ಗೆಳೆಯ

**ಬಿ. ರವೀಶ್ ಕುಮಾರ್**

ನಿವೃತ್ತ ಕನ್ನಡ ಭಾಷಾ ಶಿಕ್ಷಕರು

ರಾಜ್ಯ ಸಂಪನ್ಮೂಲ ವ್ಯಕ್ತಿಗಳು (ಕನ್ನಡ)

# 2905, ಹೊನ್ನಸಿರಿ, 3 ನೆಯ ತಿರುವು,

'ಎಫ್' ಬ್ಲಾಕ್, ಕನಕದಾಸನಗರ, ಮೈಸೂರು – 570033

**ಸಂಚಾರಿವಾಣಿ ಸಂಖ್ಯೆ : 9448958498**